ಗಳುಳ್ಳ ಮುಖಪತ್ರ (ಲೇಬಲ್)ಗಳನ್ನಂಟಿಸಿ, ರೋಚಕ ವರ್ಣನೆಯುಳ್ಳ ಅನುಪಾನ ಪತ್ರಗಳೊಂದಿಗೆ ತಮ್ಮ ವ್ಯಾಪಾರದ ಮುಖ್ಯ ಕೇಂದ್ರಸ್ಥಾನ ವಾಗಿರುವ ಭಾರತ ದೇಶಕ್ಕೆ ಕಳುಹಿಸಲಾರಂಭಿಸಿದರು. ನಾವು ಅವು ಗಳನ್ನೇ ಮಹಾಪ್ರಸಾದವೆಂದು ತಿಳಿದು ಒಂದಕ್ಕೆ ಹತ್ತರಷ್ಟು ಬೆಲೆಯನ್ನು ಕೊಟ್ಟು ಕೊಂಡುಕೊಳ್ಳಲಾರಂಭಿಸಿದೆವು! ವನಸ್ಪತಿಗಳ ಭಂಡಾರದಲ್ಲಿಯೇ ನಾವು ಹುಟ್ಟಿ ಬೆಳೆದಿದ್ದರೂ ಅವುಗಳ ಮಹತ್ವವನ್ನರಿಯದೆ, ಅವುಗಳನ್ನು ಇತರರಿಗೆ ದುಡ್ಡಿಗೆ ಪಂಚೇರಿನಂತೆ ಮಾರಿ ಪುನಃ ರೂಪಾಂತರಗೊಂಡಿರುವ ಆ ಪದಾರ್ಥಗಳನ್ನೇ ಹತ್ತರಷ್ಟು ಹಣವನ್ನು ಸುರಿದು ವಿಕ್ರಯಿಸುತ್ತಿರು ವೆವು! ವ್ಯಾಪಾರ ಚತುರರಾದ ಪಶ್ಚಿಮ ದೇಶೀಯರು ದ್ರವ್ಯಾರ್ಜನೆಗಾಗಿ ಅನಂತ ಮಾರ್ಗಗಳನ್ನು ನಿರ್ಮಿಸಿಕೊಂಡು ತಮ್ಮ ಆರ್ಥಿಕೋನ್ನತಿಯನ್ನು ಎಡೆಬಿಡದೆ ಅತಿ ಪರಿಶ್ರಮದಿಂದ ವೃದ್ಧಿಮಾಡಿಕೊಳ್ಳುತ್ತಿರುವರೆಂಬುದು ಸತತೋದ್ಯೋಗಿಗಳಾದ ಕುಶಲಮತಿಗಳ ಕರ್ತವ್ಯವೇ ಆಗಿರುತ್ತದೆ. ಅವರು ತಮ್ಮ ಕರ್ತವ್ಯವನ್ನು ಪರಿಪಾಲಿಸುವುದರಲ್ಲಿ ನಿರತರಾಗಿರುತ್ತಾರೆ. ಪ್ರಯತ್ನ ಶೂನ್ಯರಾದ ನಾವುಗಳು ಆಲಸ್ಯದಿಂದ ಕರ್ತವ್ಯಮಾರ್ಗಚ್ಯುತರಾಗಿ, ತಲೆಯಮೇಲೆ ಕೈಗಳನ್ನಿಟ್ಟುಕೊಂಡು ಕುಳಿತು, ಇತರರ ಮೇಲೆ ದೋಷಾ ರೋಪಣೆಯನ್ನು ಮಾಡುತ್ತಿರುವೆವು! ಇದು ನಮ್ಮ ಹುಚ್ಚುತನವಲ್ಲದೆ ಮತ್ತೇನೂ ಅಲ್ಲವೆಂದು ಧಾರಾಳವಾಗಿ ಹೇಳಬಹುದು.

> ಉದ್ಯಮೇನ ಹಿ ಸಿಧ್ಯಂತಿ ಕಾರ್ಯಾಣಿ ನ ಮನೋರಥೈಃ ।
> ನ ಹಿ ಸುಪ್ತಸ್ಯ ಸಿಂಹಸ್ಯ ಪ್ರವಿಶಂತಿ ಮುಖೇ ಮೃಗಾಃ ॥

ಎಂಬ ನೀತಿವಾಕ್ಯದಂತೆ ಸಕಲ ಕಾರ್ಯಗಳೂ ಪ್ರಯತ್ನವಿಶೇಷದಿಂದಲೇ ಸಾಧ್ಯವಾಗತಕ್ಕವುಗಳಾಗಿವೆ. ನಿದ್ರಿಸುತ್ತಿರುವ ಸಿಂಹದಬಾಯಿಯಲ್ಲಿ ಮೃಗ ಗಳು ತಾವಾಗಿಯೇ ಬಂದುಬೀಳುವುದಿಲ್ಲ. ಎಷ್ಟೋ ಕಾಲದಿಂದ ಆಲಸ್ಯ ನಿದ್ರೆಯಲ್ಲಿ ಮೈಮರೆತುಹೋಗಿದ್ದ ನಮ್ಮ ದೇಶದ ವೈದ್ಯಬಂಧುಗಳು ಈಗ ಲಾದರೂ ಪರಸ್ಪರವಾಗಿ ದ್ವೇಷಾಸೂಯೆಗಳನ್ನು ಬಿಟ್ಟು ಒಮ್ಮನಸ್ಸಿನಿಂದ ಮತ್ತೊಮ್ಮೆ ಆಯುರ್ವೇದೋದ್ಧಾರ ಕಾರ್ಯದಲ್ಲಿ ಪರದೇಶದವರಂತೆ ನಾನಾ ವಿಧ ಪ್ರಯತ್ನವಿಶೇಷಗಳನ್ನು ಮಾಡಲಾರಂಭಿಸಿದರೆ, ದಿನಕ್ರಮದಿಂದ ಆ ಪ್ರಾಚೀನಕಾಲದ ಆಯುರ್ವೇದ ವೈಭವವು ಪುನಃ ಯಥಾರೀತಿಯಾಗಿ

ತನ್ನ ಪ್ರಭುತ್ವವನ್ನು ಸಕಲ ದಿಗ್ದೇಶಗಳಲ್ಲಿ ಸ್ಥಾಪಿಸಿಕೊಳ್ಳುವುದರಲ್ಲಿ ಯಾವ ಸಂಶಯವೂ ಇಲ್ಲ.

ದುರ್ವಿಧಿಯ ವಿಲಾಸದಿಂದ ನಮ್ಮ ಭಾರತ ಭಾಗ್ಯ ಸೂರ್ಯನು ನೂರಾರು ವರ್ಷಗಳಿಂದ ಪಾರತಂತ್ರ್ಯವೆಂಬ ಮೇಘ ಮಂಡಲದಲ್ಲಿ ಸಿಕ್ಕಿ ಅತ್ಯಂತ ಕ್ಷೀಣಪ್ರಕಾಶವುಳ್ಳವನಾಗಿದ್ದನು. ದೇಶಪ್ರೇಮದಿಂದ ಪ್ರೇರಿತ ರಾದ ದೇಶನಾಯಕರ ಸತತ ಪ್ರಯತ್ನವಿಶೇಷವೆಂಬ ಗಾಳಿಯು, ದಯಾ ಮಯನಾದ ಪರಮೇಶ್ವರನ ಅಪಾರಮಹಿಮೆಯಿಂದ ಸುಮಾರು ಅರ್ಧ ಶತಮಾನದಕಾಲದಿಂದ ಸಕಲ ದಿಕ್ಕುಗಳಲ್ಲಿ ಮೆಲ್ಲನೆ ಬೀಸಲಾರಂಭಿಸಿತು. ಕಾಲದ ಪರಿಪಾಕದಿಂದ ಆ ಗಾಳಿಯು ಈಗ ಅತಿ ಪ್ರಬಲವಾಗಿ ಬೀಸುತ್ತ ದಶದಿಕ್ಕುಗಳಲ್ಲಿ ವ್ಯಾಪಿಸಲಾರಂಭಿಸಿದೆ. ಈ ಕಾರಣದಿಂದಲೇ ಭಾರತ ಭಾಗ್ಯ ಸೂರ್ಯನನ್ನು ಆಕ್ರಮಿಸಿದ್ದ ಆ ಮೇಘಮಂಡಲವು ಅತಿ ವೇಗ ದಿಂದ ಈಗೀಗ ಮಾಯವಾಗುತ್ತಾ ಬರುತ್ತಿದೆ. ಇನ್ನು ಅತ್ಯಲ್ಪ ಕಾಲ ದಲ್ಲಿಯೇ ನಮ್ಮ ಭಾರತಭಾಗ್ಯ ಸೂರ್ಯನು ನಿರ್ಮಲಾಕಾಶದಲ್ಲಿ ದೇದೀಪ್ಯ ಮಾನನಾಗಿ, ತನ್ನ ದಿವ್ಯಜ್ಯೋತಿಯಿಂದ ಪ್ರಪಂಚಕ್ಕೆ ಜೀವದಾನವನ್ನು ಮಾಡುವಂತಹ ಸುಲಕ್ಷಣಗಳು ದಿನದಿನಕ್ಕೆ ಬಲವಾಗುತ್ತಾ ಬರುತ್ತಿವೆ. ಇಂತಹ ಸ್ವತಂತ್ರ ವಾತಾವರಣದಲ್ಲಿ ನಮ್ಮ ಆಯುರ್ವೇದ ಚಿಕಿತ್ಸಾ ಪ್ರಣಾಳಿಯು ಸರ್ವತೋಮುಖವಾದ ಉನ್ನತಿಯನ್ನು ಪಡೆದು, ತನ್ನ ಏಕ ಮಾತ್ರ ಪ್ರಭುತ್ವವನ್ನು ಪುನಃ ಜಗತ್ತಿನಲ್ಲಿ ಸ್ಥಾಪಿಸಿಕೊಳ್ಳುವಂತಾಗುವುದ ರಲ್ಲಾವ ಸಂಶಯವೂ ಇಲ್ಲ. ಈಗಾಗಲೇ ಮದರಾಸ್, ಸಂಯುಕ್ತಪ್ರಾಂತ ಮುಂತಾದ ಕೆಲವುಪ್ರಾಂತಗಳಲ್ಲಿ ಆಯುರ್ವೇದ ಚಿಕಿತ್ಸೆಗೆ ಬಹಳ ಪ್ರೋತ್ಸಾ ಹವು ದೊರೆಯ ಲಾರಂಭಿಸಿದೆ.

ನಮ್ಮ ಕರ್ಣಾಟಕಪ್ರಾಂತಗಳ ರಾಜಧಾನಿಯಾಗಿರುವ ಮೈಸೂರು ಸಂಸ್ಥಾನವೂ ಈಗ ಆಯುರ್ವೇದ ಚಿಕಿತ್ಸೆಗಾಗಿ ಬಹಳ ಪ್ರೋತ್ಸಾಹವನ್ನು ಕೊಟ್ಟು ಈ ಚಿಕಿತ್ಸಾಪ್ರಣಾಳಿಯನ್ನು ಸರ್ಕಾರದ ಆಡಳಿತಕ್ಕೆ ತೆಗೆದು ಕೊಂಡಿರುವುದು ಆಯುರ್ವೇದ ಜಗತ್ತಿನಲ್ಲಿ ಅಪಾರ ಸಂತೋಷವನ್ನುಂಟು ಮಾಡತಕ್ಕುದಾಗಿದೆ. ನಮ್ಮನ್ನಾಳುವ ಮಹಾಪ್ರಭುವರ್ಯರಾದ ಶ್ರೀಮನ್ಮ ಹಾರಾಜ ಶ್ರೀ ಜಯಚಾಮರಾಜೇಂದ್ರ ಒಡೆಯರ್ ಮಹಾಸ್ವಾಮಿಯವರು

ತಮ್ಮ ಕರುಣಾದೃಷ್ಟಿಯನ್ನು ನಮ್ಮ ಆಯುರ್ವೇದ ಚಿಕಿತ್ಸಾ ಪದ್ಧತಿಯ ಮೇಲೆ ಸಂಪೂರ್ಣವಾಗಿ ಇಟ್ಟಿರುವುದರಿಂದ ಈಗ ಮೈಸೂರುಸಂಸ್ಥಾನ ದಲ್ಲಿ ಈ ಚಿಕಿತ್ಸೆಯು ಸರ್ವತೋಮುಖವಾಗಿ ಅಭಿವೃದ್ಧಿಯಾಗುತ್ತಿದೆ. ಮತ್ತು ಮಹಾಪ್ರಭುಗಳವರ ಅಮೃತ ಹಸ್ತದಿಂದ ಬೆಂಗಳೂರಿನಲ್ಲಿ ಒಂದು ವಿಶಾಲವಾದ ಆಯುರ್ವೇದ ಚಿಕಿತ್ಸಾಲಯವು ಆವಿರ್ಭವಿಸಿ ಈಗ ಪ್ರಕಾಶ ಮಾನವಾಗುತ್ತಿದೆ. ಮತ್ತು ಉದಾರದಾನಿಗಳಾದ ಅನೇಕ ಶ್ರೀಮಂತರ ಸಹಾಯ ಸಂಪತ್ತಿಯನ್ನು ಪಡೆಯುತ್ತಿರುವುದರಿಂದ ಈ ಚಿಕಿತ್ಸೆಯ ಭಾಗ್ಯೋದಯವು ಪುನಃ ಆರಂಭಿಸಿದಂತಾಗಿದೆ.

ಈಶ್ವರನ ಪ್ರೇರಣೆಯಿಂದ ಆಯುರ್ವೇದದ ಉನ್ನತಿಗೆ ಅನೇಕ ಸಹಾ ಯಗಳು ಒದಗುತ್ತಿರುವ ಇಂತಹ ಸುಸಮಯದಲ್ಲಿ ನಮ್ಮ ಭರತಖಂಡದ ಮತ್ತು ಆಯಾಯ ಪ್ರಾಂತದ ವೈದ್ಯವಿದ್ವಾಂಸರು ಜಾಗ್ರತರಾಗಿ, ಪರಸ್ಪರ ಸಹಯೋಗದಿಂದ, ನಮ್ಮ ಆಯುರ್ವೇದ ಚಿಕಿತ್ಸೆಯನ್ನು ಹಿಂದಿನ ಕಾಲ ದಂತೆ ಜಗದ್ವ್ಯಾಪಿಯನ್ನಾಗಿ ಮಾಡಲು ಸರ್ವರೀತಿಯಿಂದಲೂ ಪ್ರಯತ್ನಿಸ ಬೇಕಾದುದು ಅತಿಮುಖ್ಯ ಕಾರ್ಯವಾಗಿದೆ. ನಾವು ಕಳೆದುಕೊಂಡಿದ್ದ ಗೌರವ ಪ್ರತಿಷ್ಠೆಗಳು ದೈವಯೋಗದಿಂದ ಪುನಃ ನಮಗೆ ಸಂಭವಿಸುವ ಶುಭಸೂಚನೆ ಗಳು ತೋರುತ್ತಿರುವಾಗ, ನಮ್ಮ ವೈದ್ಯ ಬಂಧುಗಳು ಸಂಘೀಭೂತರಾಗಿ ಪಾರಸ್ಪರಿಕ ಮತಭೇದಗಳನ್ನು ಮತ್ತು ವೈಯ್ಯಕ್ತಿಕ ದ್ವೇಷಾಸೂಯೆಗಳನ್ನು ಬಿಟ್ಟು ಆಯುರ್ವೇದದ ಸೇವೆಗೆ ಸನ್ನದ್ಧರಾಗಬೇಕು. "ನಹಿ ಸರ್ವಃ ಸರ್ವಂ ಜಾನಾತಿ" (ಎಲ್ಲರೂ ಎಲ್ಲ ವಿಷಯಗಳನ್ನೂ ತಿಳಿದಿರುವುದಿಲ್ಲ) ಎಂಬ ಮಹೋನ್ನತವಾದ ಸದ್ಭಾವವು ಪ್ರತಿಯೊಬ್ಬ ವೈದ್ಯನ ಮನಸ್ಸಿನಲ್ಲಿ ಸ್ಥಿರಗೊಳ್ಳಬೇಕು. ಪ್ರಾಣಾಚಾರ್ಯರೆಂಬ ಮಹೋನ್ನತ ನಾಮಧೇಯ ದಿಂದ ಭೂಷಿತರಾಗಿರುವ ನಮ್ಮ ವೈದ್ಯ ಬಂಧುಗಳು, ಪ್ರಾಣಿಗಳ ಪ್ರಾಣ ರಕ್ಷಣೆಗೋಸುಗ ತಮ್ಮ ಪ್ರಾಣವನ್ನಾದರೂ ಅರ್ಪಿಸಲು ಸಿದ್ಧರಾಗುತ್ತಿದ್ದ ನಮ್ಮ ಪ್ರಾಚೀನ ಪ್ರಾಣಾಚಾರ್ಯರ ಸದುದ್ದೇಶಗಳನ್ನು ಮತ್ತು ಅವರ ಗೌರವ ಪ್ರತಿಷ್ಠೆಗಳನ್ನು ರಕ್ಷಿಸಬೇಕು. ಅವರು ಅನುಸರಿಸುತ್ತಿದ್ದ ಲೋಕೋಪಕಾರಕವಾದ ಉದಾತ್ತ ಭಾವವನ್ನು ಆದಷ್ಟುಮಟ್ಟಿಗೆ ಅನು ಸರಿಸಬೇಕು. ಇಲ್ಲವಾದರೆ ನಾವು ಪ್ರಾಣಾಚಾರ್ಯರೆಂದೆನಿಸಿಕೊಳ್ಳಲು

ಹಿಂಜರಿಯಬೇಕಾಗುತ್ತದೆ. ಆಧುನಿಕ ಬಾಹ್ಯಾಡಂಬರಗಳಿಗೆ ಮನ ಸೋತು ಸ್ವಾರ್ಥಪರರಾಗಿ ನಮ್ಮ ಹಿರಿಯರ ಕೀರ್ತಿಗೆ ಕಳಂಕವನ್ನು ತರುವಂತಹ ಕಾರ್ಯಗಳನ್ನು ಮಾಡಬಾರದು. ಆ ನಮ್ಮ ಮಹಾಪುರುಷರ ಲೋಕೋಪಕಾರವು ನಿಸ್ಸ್ವಾರ್ಥಪೂರಿತವಾಗಿದ್ದಿತಲ್ಲದೆ ಸ್ವಾರ್ಥಪೂರಿತವಾಗಿರಲಿಲ್ಲ. ಆ ಮಹಾನುಭಾವರ ನಿಸ್ಸ್ವಾರ್ಥತೆಯ ಬಲದಿಂದಲೇ ಹಿಂದಿನ ಕಾಲದಲ್ಲಿ ನಮ್ಮ ಆಯುರ್ವೇದ ವೈಭವವು ಪ್ರಪಂಚದಲ್ಲೆಲ್ಲಾ ಏಕಚಕ್ರಾಧಿಪತ್ಯದಿಂದ ಬೆಳಗುತ್ತಿದ್ದಿತು. ಸ್ವಾರ್ಥವನ್ನು ಪೂರ್ತಿಯಾಗಿ ಯಾರೂ ಬಿಟ್ಟಿಲ್ಲ! ಆದರೆ, ಪರಾರ್ಥಕ್ಕೆ ಹಾನಿಯು ಬರದಿರುವಂತಹ ಸ್ವಾರ್ಥವು ಒಂದು ಪರಿಮಿತಿಯಲ್ಲಿದ್ದರೆ ಮಾತ್ರ ಅದು ಅಷ್ಟೊಂದು ಹಾನಿಕರವಾಗಲಾರದು. ನಮ್ಮ ನಾಡಿನ ವೈದ್ಯ ಬಂಧುಗಳು ಈ ತತ್ವವನ್ನು ಮನಸ್ಸಿನಲ್ಲಿಟ್ಟು ನಡೆಯುವುದಾದರೆ ನಮ್ಮ ಆಯುರ್ವೇದದ ಪ್ರಭಾವವು ಹಿಂದಿನ ಕಾಲದಂತೆ ಸಂಪೂರ್ಣಜಗತ್ತನ್ನೇ ಮುಗ್ಧಗೊಳಿಸುವಂತಾಗುವುದರಲ್ಲಿ ಯಾವ ಸಂದೇಹವೂ ಇಲ್ಲ. ಇಂತಹ ಆನಂದದಾಯಕವಾದ ಸುಯೋಗವು ಅತಿ ಶೀಘ್ರದಲ್ಲಿಯೇ ಆಯುರ್ವೇದ ಜಗತ್ತಿಗೆ ಲಭಿಸುವಂತೆ ಅನುಗ್ರಹಿಸಬೇಕೆಂತಲೂ ಮತ್ತು ಆಯಾಯ ಪ್ರಭುತ್ವದ ಉದಾರ ಸಹಾಯಸಂಪತ್ತಿ, ವೈದ್ಯರ ನಿಸ್ಸ್ವಾರ್ಥಪೂರಿತವಾದ ಲೋಕೋಪಕಾರಕ ಜ್ಞಾನಸಂಪತ್ತಿ, ನಾಡಿನ ಮಹೋನ್ನತ ದಾನಶೂರರ ಸಹಾನುಭೂತಿ ಸಹಿತವಾದ ಸಹಾಯ ಸಂಪತ್ತಿ ಈ ತ್ರಿವಿಧ ಸಂಪತ್ತಿಗಳ ಪರಂಪರೆಯು ಅವಿಚ್ಛಿನ್ನವಾಗಿ ಲಭಿಸುತ್ತಿರುವಂತೆ ಆಶೀರ್ವದಿಸಬೇಕೆಂತಲೂ ಅವ್ಯಾಜ ಕರುಣಾಸಿಂಧುವಾಗಿರುವ ಪರಮೇಶ್ವರನನ್ನು ಅನನ್ಯಭಾವದಿಂದ ಪ್ರಾರ್ಥಿಸುವುದಾಗುತ್ತದೆ.

ಸರ್ವಜಿತ್ ಸಂವತ್ಸರ ಚೈತ್ರ ಶುದ್ಧ<br>ಪ್ರತಿಪತ್ ಭಾನುವಾರ ೨೩-೩. ೧೯೪೭

ಇತಿ<br>**ಶಿವಕುಮಾರಸ್ವಾಮಿ.**

# ನಿವೇದನೆ

ಆರೋಗ್ಯದರ್ಪಣದ ಮೊದಲನೆಯ ಮುದ್ರಣವು ೧೯೪೩ನೆಯ ಇಸವಿಯಲ್ಲಿ ಮಾನ್ಯಪಾಠಕರ ಸೇವೆಗೆ ಸಿದ್ಧವಾಗಿ ನಮ್ಮ ನಾಡಿನ ಪ್ರಮುಖಗಳಾದ ದೈನಿಕ, ಸಾಪ್ತಾಹಿಕ, ಮಾಸಪತ್ರಿಕೆಗಳ ಘನತರವಾದ ಮೆಚ್ಚಿಗೆ ಪಾತ್ರವಾಗುವುದಲ್ಲದೆ ಅನೇಕ ಸನ್ಮಾನ್ಯ ವಿದ್ವನ್ಮಣಿಗಳ ಮೆಚ್ಚಿಗೆಗೂ, ಕನ್ನಡನಾಡಿನ ಮಾನ್ಯಪಾಠಕರ ಮೆಚ್ಚಿಗೂ ಪಾತ್ರವಾಗಿ ಅತ್ಯಲ್ಪಕಾಲದ ಅವಧಿಯಲ್ಲಿಯೇ ಮೊದಲನೆಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದು ಹೋದುವು. ಗ್ರಂಥದಲ್ಲಿರುವ ವಿಷಯಗಳು ನಮ್ಮ ದೇಶದ ಪಟ್ಟಣಗಳ ಮತ್ತು ಹಳ್ಳಿಗಳ ನಿವಾಸಿಗಳಿಗೆ ಅತ್ಯುಪಯುಕ್ತವಾಗಿವೆಯೆಂಬಂಶವನ್ನು ಗಮನಿಸಿದ ನಮ್ಮ ಘನ ಸರ್ಕಾರದವರು ಈ ಗ್ರಂಥವನ್ನು ಮೈಸೂರು ಸಂಸ್ಥಾನದ ಎಲ್ಲ ಸ್ಕೂಲು ಕಾಲೇಜುಗಳ ಲೈಬ್ರೆರಿಗಳಲ್ಲಿಡುವಂತೆ (ನಂ ಟಿ. ಬಿ. ಸಿ. ೫೦ ೪೩-೪೪ ತಾರೀಕು ೨೭ ನವೆಂಬರ್) ಆಯಾಯ ಸ್ಕೂಲು, ಕಾಲೇಜಿನ ಮುಖ್ಯೋಪಾಧ್ಯಾಯರುಗಳಿಗೆ ಅಪ್ಪಣೆಯನ್ನಿತ್ತಿರುತ್ತಾರೆ.

ಮೊದಲನೆಯ ಮುದ್ರಣದ ಆರೋಗ್ಯದರ್ಪಣಗ್ರಂಥವು ಮೊದಲು ನಮ್ಮನ್ನಾಳುವ ಶ್ರೀಮನ್ಮಹಾರಾಜ ಶ್ರೀಮಜ್ಜಯಚಾಮರಾಜೇಂದ್ರ ಒಡೆಯರ್ ಮಹಾಪ್ರಭುವರ್ಯರ ದಿವ್ಯಸನ್ನಿಧಿಗೆ ಕಾಣಿಕೆಯಾಗಿ ಸಮರ್ಪಿಸಲ್ಪಟ್ಟು ಮಹಾಸ್ವಾಮಿಯವರ ಕೃಪಾಕಟಾಕ್ಷಕ್ಕೆ ಪಾತ್ರವಾಯಿತು. ತತ್ಫಲರೂಪವಾಗಿ ಮಹಾಪ್ರಭುಗಳವರು ತಮ್ಮ ಆಸ್ಥಾನವಿದ್ವನ್ಮಂಡಲಿಯಲ್ಲಿ ಸೇರುವಂತಹ ಸುಯೋಗವನ್ನು ಗ್ರಂಥಕರ್ತನಿಗೆ ಅನುಗ್ರಹಿಸಿದರು. ಇದಕ್ಕಾಗಿ ಕರ್ಣಾಟಕ ಸಿಂಹಾಸನಾಧೀಶ್ವರ ಶ್ರೀಮನ್ಮಹಾರಾಜ ಶ್ರೀಮಜ್ಜಯಚಾಮರಾಜೇಂದ್ರ ಮಹಾ ಪ್ರಭುವರ್ಯರ ದಿವ್ಯ ಸನ್ನಿಧಿಯಲ್ಲಿ ಗ್ರಂಥಕರ್ತನು ತನ್ನ ರಾಜಭಕ್ತಿಯನ್ನು ಸಮರ್ಪಿಸುತ್ತಾನೆ.

ಮೊದಲನೆಯ ಮುದ್ರಣದ ಪ್ರತಿಗಳೆಲ್ಲವೂ ಮುಗಿದನಂತರ ಅನೇಕ ಸ್ಥಳಗಳ ಅನೇಕ ಮಹಾಶಯರಿಂದ ನೂರಾರು ಬೇಡಿಕೆಗಳು ಬಂದುವು, ಆದರೆ ಪುನರ್ಮುದ್ರಣಕ್ಕೆ ಬೇಕಾಗುವ ಕಾಗದ ಮುಂತಾದ ಸಲಕರಣೆಗಳ

ಅಭಾವಪರಿಸ್ಥಿತಿಯುಂಟಾಗಿದ್ದುದರಿಂದ ಕೂಡಲೇ ಆ ಬೇಡಿಕೆಗಳನ್ನು ಪೂರೈಸಲು ಸಾಧ್ಯವಾಗಲಿಲ್ಲ. ಇಂತಹ ಕಾಗದದ ಮುಗ್ಗಟ್ಟಿನ ಸಮಯ ದಲ್ಲಿಯೂ ನಮ್ಮ ಘನಸರ್ಕಾರದವರು ಪುನರ್ಮುದ್ರಣಕ್ಕೆ ಸಾಕಾಗುವಷ್ಟು ಕಾಗದವನ್ನು ಕೊಟ್ಟು ಪ್ರೋತ್ಸಾಹಿಸಿದುದರಿಂದ ತಡವಾಗಿಯಾದರೂ ಪುನಃ ಪಾಠಕರಸೇವೆಗಾಗಿ ಆರೋಗ್ಯದರ್ಪಣವು ಎರಡನೆಯಸಲ ಸಿದ್ಧವಾಯಿತು. ಮೊದಲಿನ ಮುದ್ರಣದಲ್ಲಿ ಸೇರದೆ ಇದ್ದ ಅತ್ಯುಪಯುಕ್ತಗಳಾದ ಅನೇಕ ಚಿಕಿ ತ್ಸೆಗಳು ಮತ್ತು ವನಸ್ಪತಿಗಳು ಈಮುದ್ರಣದಲ್ಲಿ ಸೇರಿಸಲ್ಪಟ್ಟಿವೆ. ಮತ್ತು ವಿಷ ಯಾನುಕ್ರಮಣಿಕೆಯಲ್ಲಿ ಗ್ರಂಥಗತಗಳಾದ ವಿಷಯ ಮತ್ತು ಚಿಕಿತ್ಸೆಗಳನ್ನೆಲ್ಲ ಅಕಾರಾದಿಕ್ರಮದಿಂದ ಸಂಗ್ರಹಿಸಿ ಕಾಣಿಸಿರುವುದಾಗಿದೆ. ಈ ದ್ವಿತೀಯ ಮುದ್ರಣದಲ್ಲಿ ಅನೇಕಮಹತ್ವದ ವಿಷಯಗಳನ್ನು ಬಹಳ ವಿಸ್ತಾರವಾಗಿ ವಿಮರ್ಶಿಸಿ ಬರೆದಿರುವುದಾಗಿದೆ. ಅವುಗಳನ್ನೆಲ್ಲಾ ವಿಷಯಸೂಚಿಕೆಯಲ್ಲಿ ಕೊಡಲು ಸಾಧ್ಯವೇ ಇಲ್ಲ. ವಿಷಯದ ಜಿಜ್ಞಾಸುಗಳು ಗ್ರಂಥದ ಹೃದಯ ದಲ್ಲಿ ತಮ್ಮ ಹೃದಯವನ್ನು ಪ್ರವೇಶಗೊಳಿಸಬೇಕು. ಕೇವಲ ಚಿಕಿತ್ಸೆಗಾಗಿ ವಿಷಯಾನುಕ್ರಮಣಿಕೆಯನ್ನು ನೋಡಿಬಿಡುವುದರಿಂದ ಗ್ರಂಥಕರ್ತನ ಪರಿ ಶ್ರಮವು ವ್ಯರ್ಥವಾಗಿಬಿಡುತ್ತದೆ. ಆದುದರಿಂದ ಮಾನ್ಯಪಾಠಕರುವಿಮರ್ಶಾ ತ್ಮಕ ದೃಷ್ಟಿಯಿಂದ ಗ್ರಂಥವನ್ನು ಬೇಸರವಿಲ್ಲದೆ ದಯೆಯಿಟ್ಟು ಓದಿ ಅವುಗ ಳನ್ನು ಮನನಮಾಡಿಕೊಂಡು; ಗ್ರಂಥಕರ್ತನ ಪರಿಶ್ರಮವನ್ನು ಸಾರ್ಥಕ ಗೊಳಿಸಬೇಕಾಗಿ ನಿವೇದನೆ. ಮತ್ತು ತಮ್ಮ ಉದಾರದೃಷ್ಟಿಗೆ ಕಾಣಿಸು ವಂತಹ ಲೋಪದೋಷಗಳೇನಾದರೂ ಇದ್ದರೆ ಅವುಗಳನ್ನು ಯಾವ ಸಂ ಕೋಚವೂ ಇಲ್ಲದೆ ದಯೆಯಿಟ್ಟು ತಿಳಿಸಿದರೆ ಮುಂದಿನ ಮುದ್ರಣದಲ್ಲಿ ಸರಿಪಡಿಸಲಾಗುತ್ತದೆ.

ಮೊದಲಿನ ಗ್ರಂಥವು ಪೀಠಿಕೆ, ವಿಷಯಾನುಕ್ರಮಣಿಕೆ ಸಹಿತವಾಗಿ ೩೮೦ ಪುಟಗಳಿಂದ ಕೂಡಿದ್ದಿತು. ಪರಿಸ್ಥಿತಿಯನ್ನನುಸರಿಸಿ ಅದಕ್ಕೆ ಎರ ಡೂವರೆ ರೂಪಾಯಿ ಬೆಲೆಯನ್ನಿಡಲಾಗಿದ್ದಿತು. ಆದರೆ ಈಸಲ ಕಾಗದ, ಪ್ರಿಂಟಿಂಗ್ ಬೈಂಡು ಮೊದಲಾದ ಸಲಕರಣೆಗಳಿಗಾಗಿ ಒಂದಕ್ಕೆ ಮೂರ ರಷ್ಟು ಹಣವು ಖರ್ಚಾಗುವುದು ಅನಿವಾರ್ಯವಾಯಿತಾದಕಾರಣ ಈ ಪರಿವರ್ಧಿತ ಸಂಸ್ಕರಣದ ೫೦೦ ಪುಟಗಳ ಪುಸ್ತಕಕ್ಕೆ ೪–೮–೦ ರೂಪಾಯಿ

ಗಳನ್ನಿಡಲೇಬೇಕಾದಪ್ರಸಂಗವೊದಗಿತುಇದಕ್ಕಾಗಿ ಗ್ರಾಹಕರಕ್ಷಮೆಯನ್ನು ಬೇಡುವುದಾಗುತ್ತದೆ. ವಿಷಯಗಳ ಮಹತ್ವವನ್ನೂ, ಕಾಲಪರಿಸ್ಥಿತಿಯನ್ನು ಅರಿತಿರುವ ಮಾನ್ಯಗ್ರಾಹಕರ ಮನಸ್ಸಿಗೆ ಈ ಬೆಲೆಯು ಅಷ್ಟೇನೂ ಹೆಚ್ಚೆಂದೆನಿಸಲಾರದು. ಮತ್ತು ಈಸಲ ಮಾನ್ಯಗ್ರಾಹಕರ ಪ್ರೋತ್ಸಾಹವು ಹೆಚ್ಚಾಗಿ ದೊರೆತರೆ ಮುಂದಿನ ಗ್ರಂಥಪುಷ್ಪಗಳೂ ಶೀಘ್ರವಾಗಿ ವಿಕಾಸಗೊಳ್ಳುವುವು.

ಮೊದಲಿನ ಮುದ್ರಣಕ್ಕೆ ಬೇಕಾಗಿದ್ದ ಕಾಗದದ ಖರ್ಚನ್ನೆಲ್ಲ ಇದೇ ನಗರದ ಸುಪ್ರಸಿದ್ಧ ಸುಗಂಧದ್ರವ್ಯಗಳ (ಊದಬತ್ತಿ) ಕಾರ್ಖಾನೆಯ ಮಾಲೀಕರಾದ ಶ್ರೀಮಾನ್ ಯಜಮಾನ್ ಕೆಂಚಪ್ಪನವರು ಉದಾರಪೂರ್ವಕವಾಗಿ ವಹಿಸಿಕೊಂಡು ಗ್ರಂಥದ ಪ್ರಕಟನೆಗೆ ಬಹಳ ಸಹಾಯವನ್ನು ಮಾಡಿರುತ್ತಾರೆ. ಈ ಎರಡನೆಯ ಮುದ್ರಣಕ್ಕೆ ಬೇಕಾಗಿದ್ದ ಕಾಗದ ಪ್ರಿಂಟು, ಬೈಂಡು ಮೊದಲಾದುವುಗಳಿಗೆ ಆವಶ್ಯಕವಾದ ಸಂಪೂರ್ಣ ಧನ ಸಹಾಯವನ್ನು ಒದಗಿಸಿಕೊಟ್ಟಿರುವ ಇದೇ ನಗರದ ಮಂಡಿಯ ವ್ಯಾಪಾರಿಗಳೂ, ಕಬ್ಬಿಣದ ಪೆಟ್ಟಿಗೆಗಳ ವ್ಯಾಪಾರಿಗಳೂ, ಷೇರ್ ವ್ಯಾಪಾರಿಗಳೂ ಆಗಿರುವ ಶ್ರೀಮಾನ್ ಪಿ. ನಂದೀಶ್ವರಯ್ಯನವರು ಅನಂತ ಧನ್ಯವಾದಗಳಿಗೆ ಪಾತ್ರರಾಗಿರುತ್ತಾರೆ. ಈ ಉಭಯ ಮಹನೀಯರುಗಳಿಗೆ ಪರಮೇಶ್ವರನು ದೀರ್ಘಾಯುರಾರೋಗ್ಯಗಳನ್ನು ಕೊಡಲೆಂದು ಹಾರೈಸುವುದಾಗುತ್ತದೆ. ಈ ದ್ವಿತೀಯ ಮುದ್ರಣದಲ್ಲಿ ಸಾಕಾದಷ್ಟು ಎಚ್ಚರಿಕೆಯಿಂದ ಪರಿಶೋಧನಾದಿಕಾರ್ಯಗಳನ್ನು ಮಾಡಿದ್ದರೂ ಸಹ ಕೆಲವು ಮುದ್ರಣದ ದೋಷಗಳು ಉಳಿದುಹೋಗಿರುತ್ತವೆ. ಗುಣಗ್ರಾಹಿಗಳಾದ ಮಾನ್ಯ ಪಾಠಕರು ವಿಷಯಗಳ ಕಡೆಗೆ ಗಮನವಿಟ್ಟು ಆ ದೋಷಗಳನ್ನೆಣಿಸದೆ ಗ್ರಂಥಕ್ಕೆ ಪ್ರೋತ್ಸಾಹವನ್ನು ಕೊಡುವರೆಂದು ನಂಬಿರುವುದಾಗಿದೆ.

**ಗ್ರಂಥಕರ್ತ**

---

# ವಿಷಯಾನುಕ್ರಮಣಿಕೆ

## ಸ್ವಸ್ಥವೃತ್ತ



## ಆಹಾರ ವಸ್ತುಗಳು ಮತ್ತು ಚಿಕಿತ್ಸೆಗಳು

ವಿಷಯ — ಚಿಕಿತ್ಸೆಗಳ ನಂಬರು

| ವಿಷಯ | ಚಿಕಿತ್ಸೆಗಳ ನಂಬರು |
|---|---|
| ಕುಷ್ಠರೋಗದ ಹುಣ್ಣುಗಳು | .... ೮೭೩, ೪೭೪ |
| ಕೂದಲು ಮೃದುವಾಗುವುದು | .... ೮೪೦ |
| ಕೂದಲು ಉದ್ದವಾಗಿ ಬೆಳೆಯುವುದು | ೪೪೬, ೪೪೭, ೪೪೮ |
| ಕೂದಲು ಕಪ್ಪಾಗುವುದು | .... ೩೯೦, ೩೯೧, ೪೪೯ |
| ಕೂದಲು ಉದುರಿಹೋಗುವ ರೋಗ | ೩೧೧, ೩೭೯ |
| ಕೂದಲನ್ನು ಉದುರಿಸುವ ಕೃಮಿಗಳು | ೩೭೯ |
| ಕೃಮಿ (ಜಂತುಗಳು ಹೊಟ್ಟೆಯಲ್ಲಿ ಹುಟ್ಟುವುದು) ರೋಗ. | ೨೭೫ |
| ಕೆಂಪು ಮೂಲಂಗಿಯ ವಿಮರ್ಶೆ | .... ೩೫೨ (ಪೇಜು ೨೦೦) |
| ಕೆಮ್ಮಲು | .... ೧೨, ೧೫, ೧೬, ೨೦, ೯೦, ೧೮೨, ೨೦೮, ೨೭೫, ೨೭೯, ೩೫೫, ೩೬೪, ೪೦೦, ೪೦೯, ೪೧೩, ೪೧೪, ೪೨೩, ೪೩೯, ೬೬೦, ೬೭೫, ೬೮೧, ೬೮೫, ೭೦೮, ೮೦೦, ೮೦೭, ೮೦೮, ೮೧೦, ೮೧೧, ೮೯೫, ೮೬೯ |
| ಕೇಶ ಸೌಂದರ್ಯ | .... ೮೪೦ |
| ಕೈ ಕಾಲುಗಳಲ್ಲಿ ಹೆಚ್ಚಾಗಿ ಬೆವರು ಬರುವುದು. | ೧೯೬, ೪೪೩ |
| ಕೈ ಕಾಲು ಮುಖಗಳ ಶೋಭೆ | .... ೭೩೪ |
| ಕೊಂಕಳುಗಳ ದುರ್ವಾಸನೆ | .... ೪೭೯, ೭೬೬ |
| ಕೊಳೆಯುತ್ತಿರುವ ಗಾಯಗಳು | .... ೩೦೩ |
| ಕೊಳೆಯುತ್ತಿರುವ ಕುಷ್ಠರೋಗದ ಹುಣ್ಣು. | ೭೯೨ |
| ಕೋಷ್ಠಬದ್ಧತೆ | .... ೬೩೩ |
| ಖರ್ಜೂರದ ವಿಮರ್ಶೆ | .... ೪೫೧ (ಪೇಜು ೨೪೨) |
| ಗಜಕರ್ಣ (ಎಗ್ಜಿಮಾ) | .... ೧೬೭, ೧೭೪, ೨೭೩, ೩೨೪, ೪೧೦, ೫೬೨ |
| ಗಜ್ಜಿ | .... ೬೫೫ |
| ಗಂಟಲಿನ ತೊಂದರೆಗಳು | .... ೧೮೨, ೪೯೬, ೫೭೬ |
| ಗಂಟಲಿನ ಹುಣ್ಣು | .... ೮೪೨ |
| ಗಂಟಲಿನಿಂದ ರಕ್ತ ಬೀಳುವುದು | .... ೬೪೧ |

| ವಿಷಯ | ಚಿಕಿತ್ಸೆಗಳ ನಂಬರು |
|---|---|

| ವಿಷಯ | ಚಿಕಿತ್ಸೆಗಳ ನಂಬರು |
|---|---|

ವಿಷಯ — ಚಿಕಿತ್ಸೆಗಳ ನಂಬರು

ವಿಷಯ | ಚಿಕಿತ್ಸೆಗಳ ನಂಬರು

| ವಿಷಯ | ಚಿಕಿತ್ಸೆಗಳ ನಂಬರು |
|---|---|

| ವಿಷಯ | ಚಿಕಿತ್ಸೆಗಳ ನಂಬರು |
| --- | --- |
| ಶ್ವಾಸ ಅಥವಾ ದಮ್ಮಿಗೆ ಕೂಡಲೆ ಶಾಂತಿಯನ್ನು ಕೊಡುವ ಧೂಮುಪಾನ .... | ೮೯೮ |
| ಶೀಘ್ರಪತನ ದೋಷ .... | ೨೧೫, ೫೨೯ |
| ಶೀತಜ್ವರ .... | ೭೨೪ |
| ಶುದ್ಧ ರಕ್ತವು ಹುಟ್ಟುವುದು .... | ೬೯೩ |
| ಶ್ಲೇಷ್ಮದ ವಿಕಾರಗಳು .... | ೮೩೫ |
| ಶೋಭೆ .... | ೫೬೮, ೭೭೦ |
| ಷಂಡತನ .... | ೩೦೨,೩೬೪,೩೭೧,೭೦೩ |
| ಸಕಲ ವಿಧಜಂತುಗಳ ವಿಷನಿವಾರಣೆ.... | ೪೮೧, ೫೦೯ |
| ಸಕಲ ವಿಧ ಗಡ್ಡೆಗಳು .... | ೨೪೦, ೨೪೧,೨೪೨ |
| ಸಕಲ ವಿಧ ಸ್ಥಾವರ ವಿಷ (ಅಫೀಮು ಪಾಷಾಣ)ಗಳ ಶಾಂತಿ. .... | ೪೯೬, ೬೧೮, ೬೨೫, ೭೪೮ |
| ಸಕಲ ವಿಧ ವ್ರಣಗಳು .... | ೫೫೧, ೬೦೩, ೬೨೮, ೬೩೦, ೬೩೨, ೬೪೦ ೮೨೩, ೮೭೯ |
| ಸಕಲ ವಿಧ ನೋವು, ಬಾವುಗಳು .... | ೧೨೫,೮೦೩,೮೦೮,೮೧೯,೮೨೦ |
| ಸಕಲ ವಿಧ ಶೂಲೆಗಳು .... | ೭೬೧,೭೬೨,೭೬೩ |
| ಸಕ್ಕರೆಹೋಗುವುದು (ಮಧುಮೇಹ) | ೨೦೫,೨೦೯,೪೫೨,೬೩೨,೭೬೪,(ಪೇ. ೩೧೮) |
| ಅದರಿಂದ ಬರುವ ಕುರಗಳು. | ೬೦೨ |
| ಸಜ್ಜೆಯುವಿಮರ್ಶೆ .... | ೩೮ (ಪೇಜು ೧೦೧) |
| ಸಂಗ್ರಹಣಿ .... | ೫೦,೫೮,೧೪೨,೧೪೩,೨೭೯,೩೫೩, ೩೫೫, ೩೭೬,೩೭೭,೩೮೮,೩೯೫ |
| ಸಂಗ್ರಹಣಿಯ ಪರಿಚಯ .... | (ಪೇಜು ೧೩೩) |
| ಸಂತಾಪ ನಿವಾರಣೆ .... | ೩೯೩ |
| ಸದ್ವೃತ್ತ (ಸದಾಚರಣೆ) ಮಹತ್ವ .... | (ಪೇಜು ೪೧೯) |
| ಸಂಧಿವಾತ .... | ೩೫೫,೩೯೩,೪೧೧ |
| ಸಬ್ಬಸಿಗೆ ಸೊಪ್ಪಿನವಿಮರ್ಶೆ .... | ೧೩೧ (ಪೇಜು ೧೩೦) |
| ಸರ್ವಾಂಗದ ಶೋಭೆ .... | ೭೭೧ |
| ಸರ್ವಾಂಗದ ನೋವು .... | ೮೧೮,೮೧೯,೮೨೦ |
| ಸರ್ವೋತ್ತಮವಾದ ಟಾನಿಕ್ .... | ೩೦೨ |
| ಸ್ವಪ್ನದೋಷ ನಿವಾರಣೆ .... | ೧೨೧,೫೨೯ |
| ಸ್ಮರಣ ಶಕ್ತಿಯ ವೃದ್ಧಿ .... | ೯೦೦ |

ವಿಷಯ — ಚಿಕಿತ್ಸೆಗಳ ನಂಬರು

| ವಿಷಯ | ಚಿಕಿತ್ಸೆಗಳ ನಂಬರು |
|---|---|

# ಕೃತಜ್ಞತೆ

ಈ ಗ್ರಂಥದ ಮೊದಲನೆಯ ಮುದ್ರಣದ ಪ್ರತಿಗಳನ್ನು ಹಲವು ಪತ್ರಿಕೆಗಳಿಗೂ, ಮಾನ್ಯ ಮಹನೀಯರುಗಳಿಗೂ ಅವಗಾಹನೆಗಾಗಿ ಕಳಿಸಿಕೊಡಲಾಗಿತ್ತು. ಈ ಕೆಳಗೆ ಕಾಣಿಸಿರುವ ಕನ್ನಡ ಮತ್ತು ಇಂಗ್ಲಿಷ್ ಪತ್ರಿಕೆಗಳು ಗ್ರಂಥದ ವಿಮರ್ಶೆಯನ್ನು ಬರೆದು ಸದಭಿಪ್ರಾಯಗಳನ್ನು ಪ್ರಕಟಿಸಿದುವು; ಮಹನೀಯರುಗಳಾದರೂ ತಮ್ಮ ತಮ್ಮ ಘನವಾದ ಅಭಿಪ್ರಾಯಗಳನ್ನು ಸೂಚಿಸಿ ಪ್ರೋತ್ಸಾಹಿಸಿದರು. ಆ ಪತ್ರಿಕೆಗಳಿಗೂ, ಆ ಮಹನೀಯರುಗಳಿಗೂ ನಮ್ಮ ಹೃತ್ಪೂರ್ವಕವಾದ ಅನಂತ ಧನ್ಯವಾದಗಳನ್ನು ಅರ್ಪಿಸುತ್ತೇವೆ. ಅವುಗಳಲ್ಲಿ ಹಲವು ವಿಮರ್ಶೆಗಳನ್ನೂ, ಅಭಿಪ್ರಾಯಗಳನ್ನೂ ಈ ಮುಂದಿನ ಪುಟಗಳಲ್ಲಿ ಕೊಡಲಾಗಿದೆ.

**ಶ್ರೀ. ಶಿವಕುಮಾರ ಸ್ವಾಮಿ.**

## I. ವಿಮರ್ಶೆಗಳನ್ನು ಬರೆದ ಪತ್ರಿಕೆಗಳು:—

೧. ತಾಯಿನಾಡು
೨. ಮಾತೃಭೂಮಿ
೩. ವಿಶ್ವಕರ್ಣಾಟಕ
೪. ದೇಶಬಂಧು
೫. ಪ್ರಜಾಮತ
೬. ಕನ್ನಡ ಸಾಹಿತ್ಯಪರಿಷತ್ಪತ್ರಿಕೆ
೭. ಕಂಠೀರವ
೮. ಕರ್ಮವೀರ
೯. ಶರಣಸಾಹಿತ್ಯ
೧೦. ಸ್ಥಳೀಯ ಸಂಸ್ಥೆಗಳ ಪತ್ರಿಕೆ
೧೧. ಶರಣ ಸಂದೇಶ
೧೨. ವಿಕಟವಿನೋದಿನಿ
೧೩. ಚಿತ್ರಸಮಾಚಾರ
೧೪. ಮಹಾದೇವಿ
೧೫. ಸುಬೋಧ
೧೬. ವಿಮಾವಾಣಿಜ್ಯ
೧೭. ಉಷಾ
೧೮. ಹಿಂದು
೧೯. ಇಂಡಿಯನ್ ಎಕ್ಸ್‌ಪ್ರೆಸ್
೨೦. ಸಂಡೆ ಟೈಮ್ಸ್
೨೧. ಮೈಸೂರು ಟ್ರಿಬ್ಯೂನ್
೨೨. ಜನವಾಣಿ

## II. ಅಭಿಪ್ರಾಯಗಳನ್ನು ಬರೆದು ಕಳಿಸಿದ ಮಹನೀಯರುಗಳು:—

ಶ್ರೀಯುತರುಗಳಾದ:—

೧. ಯಂ. ರಾಮಚಂದ್ರನ್, ಯಂ.ಬಿ.ಬಿ.ಎಸ್., ಎಫ್.ಐ.ಯಂ.
೨. ಆಯುರ್ವೇದ ವಿದ್ವಾನ್ ಡಾ|| ವೈ. ಲಕ್ಷ್ಮೀನರಸಿಂಹ ಶಾಸ್ತ್ರೀ, ಎಲ್.ಯಂ.ಪಿ.
೩. ಧರ್ಮಪ್ರವರ್ತ, ಡಾ|| ಸಿದ್ದಪ್ಪ, ಎಲ್.ಯಂ. ಅಂಡ್ ಎಸ್.
೪. ಆಸ್ಥಾನ ಮಹಾವಿದ್ವಾನ್, ಪಂಡಿತರತ್ನಂ, ಶಿರ್ಶಿ ಶ್ರೀ. ಗುರುಶಾಂತ ಶಾಸ್ತ್ರಿಗಳು.
೫. ವೈ. ಚಂದ್ರಶೇಖರ ಶಾಸ್ತ್ರೀ, ಎಂ.ಎ., ಸಾಹಿತ್ಯ ವಿದ್ವಾನ್.
೬. ಎ. ಎನ್. ನರಸಿಂಹಯ್ಯ, ಎಂ.ಎ., ಎಲ್.ಟಿ., ಪಿ.ಎಚ್.ಡಿ. (ಲಂಡನ್)
೭. ಭಿಷಗ್ರತ್ನ ಆಯುರ್ವೇದ ವಿದ್ವಾನ್ ಬಿ. ವಿ. ಪಂಡಿತರು
೮. ಆಯುರ್ವೇದ ವಿದ್ವಾನ್ ಪಂಡಿತ ಗೋಪಾಲಕೃಷ್ಣಾವಧಾನಿಗಳು.

# “ಆರೋಗ್ಯ ದರ್ಪಣ”ದ ವಿಷಯದಲ್ಲಿ ಪತ್ರಿಕೆಗಳ ಮತ್ತು ಮಹನೀಯರ ಅಭಿಪ್ರಾಯಗಳು

## ತಾಯಿನಾಡು, ೨೮ನೇ ಆಗಸ್ಟ್ ೧೯೪೩—ಅಗ್ರಲೇಖ

........ ಆಯುರ್ವೇದದ ಪರಮ ಶ್ರೇಷ್ಠತೆಯನ್ನು ಸಾರಬಲ್ಲ ಗ್ರಂಥಗಳು ಈಗೀಗ ಹೊರಬೀಳುತ್ತಿರುವುದು ಅಭಿನಂದನೀಯವಾಗಿದೆ. ಅಂತಹ ಒಂದು ಅಪೂರ್ವ ಗ್ರಂಥವು ಈಗ ನಮ್ಮ ಹಸ್ತಗತವಾಗಿರುವುದರಿಂದ ಅದನ್ನು ವಾಚಕರ ಮುಂದಿಡಲು ಸಂತೋಷಪಡುತ್ತೇವೆ .................

ಸರಳ ಕನ್ನಡ ಭಾಷೆಯಲ್ಲಿ, ಕೇವಲ ಸಣ್ಣ ವಯಸ್ಸಿನವರಿಗೂ ತಿಳಿಯಬಹುದಾದ ರೀತಿಯಲ್ಲಿ ಮೂಲಿಕೆಗಳ ಉಪಯೋಗಗಳನ್ನೂ, ಅವುಗಳ ಚಿಕಿತ್ಸಾ ಗುಣಗಳನ್ನೂ ನಿರೂಪಿಸಿ, ಕನ್ನಡನಾಡಿಗೆ ಮಹೋಪಕಾರ ಮಾಡಿರುವ ಪಂಡಿತ ಶಿವಕುಮಾರಸ್ವಾಮಿಗಳವರನ್ನು ನಾವು ಎಷ್ಟು ಶ್ಲಾಘಿಸಿದರೂ ಸಾಲದು. ಅವರಿಂದ ವಿರಚಿತವಾದ ಈ ಗ್ರಂಥವನ್ನು ಅವಲೋಕಿಸಿದ ಮೇಲೆ ಪಾಮರಗಣಕ್ಕೆ ಸೇರಿದ ನಮಗೆ ನಮ್ಮ ಪ್ರಾಚೀನ ಸಂಪತ್ತಿನ ಜ್ಞಾನೋದಯವಾಗಿದೆ. ತರ್ಕ, ವೇದಾಂತ ಶಾಸ್ತ್ರ ಪಾರಂಗತರಾದ ಶ್ರೀ ಶಿವಕುಮಾರಸ್ವಾಮಿಯವರು ತಮ್ಮ ಪೀಠಿಕೆಯಲ್ಲಿ ಆಯುರ್ವೇದೋತ್ಪತ್ತಿಯಿಂದ ಹಿಡಿದು ಅದಕ್ಕೆ ದೊರೆತ ನಾನಾ ಪೆಟ್ಟುಗಳನ್ನು ವಿಶದೀಕರಿಸಿ, ಅದರ ಉನ್ನತಿ ಅವನತಿಗಳನ್ನು ಬಹು ಚೆನ್ನಾಗಿ ಚಿತ್ರಿಸಿದ್ದಾರೆ. ಗ್ರಂಥಾವಲೋಕನಕ್ಕೆ ಮೊದಲು ಪೀಠಿಕೆಯನ್ನು ಗ್ರಹಿಸಿದರೆ, ಆಗ ಆ ಮಹೋನ್ನತ ವಿದ್ಯೆಯ ನಿಜಸ್ವರೂಪವು ನಮಗೆ ವೇದ್ಯವಾಗುವುದು. ಪೀಠಿಕೆಯಲ್ಲಿ ಅಡಗಿರುವ ಪಾಂಡಿತ್ಯ ಭಂಡಾರವು ಪಂಡಿತ ಪಾಮರ ರಂಜಕವಾಗಿದೆ.

ನಾವು ನಮ್ಮ ದೈನಂದಿನ ಜೀವನದಲ್ಲಿ ಎಷ್ಟೋ ತರಕಾರಿಗಳನ್ನೂ ಹಣ್ಣು ಹಂಪಲುಗಳನ್ನೂ ಉಪಯೋಗಿಸುತ್ತೇವೆ. ಆದರೆ ಯಾವ ಹಣ್ಣಿನಲ್ಲಿ, ಯಾವ ತರಕಾರಿಯಲ್ಲಿ ರೋಗ ಪರಿಹಾರ ಮಾಡಬಲ್ಲ ಚಿಕಿತ್ಸಾಶಕ್ತಿಯಿದೆ ಎಂಬುದನ್ನು ನಾವರಿಯೆವು. ಅದನ್ನು ಸವಿಸ್ತಾರವಾಗಿ ವಿವರಿಸಿ, ರೋಗಬರದಂತೆ ಸರ್ವಥಾ ಆರೋಗ್ಯವಾಗಿರುವ ಅಂಶಗಳನ್ನು ಉಲ್ಲೇಖಿಸಿದ್ದಾರೆ. ಇದು ಗ್ರಂಥದ ಒಂದು ಅಪೂರ್ವ ವೈಶಿಷ್ಟ್ಯ. ...............

ಒಟ್ಟಿನಲ್ಲಿ ಈ ಗ್ರಂಥವು ಅತ್ಯಂತ ಅಮೂಲ್ಯವಾದುದು. ಕನ್ನಡ ನಾಡಿನ ಜನರನ್ನು ತಮ್ಮ ವೈಶಿಷ್ಟ್ಯದ ಕಡೆ ಕಣ್ತೆರೆಸುವ ಗ್ರಂಥ. ಗ್ರಾಮ ಪಂಚಾಯಿತಿಗಳಲ್ಲಿ, ಹೆಚ್ಚೇಕೆ, ಪ್ರತಿಮನೆಯಲ್ಲಿಯೂ ಇಂಥ ಗ್ರಂಥವಿರಬೇಕಾದುದು ಅತ್ಯಂತಾವಶ್ಯಕ. ಎಷ್ಟೋ ಮನೆಗಳಲ್ಲಿ 'ಮೂರ್ಸ್ ಫೇಮಿಲಿ ಮೆಡಿಸನ್' ಎಂಬ ಆಂಗ್ಲೇಯ ಗ್ರಂಥವನ್ನು ಇಟ್ಟುಕೊಂಡಿರುವುದು ನಮ್ಮ ಜ್ಞಾಪಕದಲ್ಲಿದೆ. ಹಾಗೆಯೇ ಇಂತಹ ಗ್ರಂಥವನ್ನು ನಮ್ಮ ನಮ್ಮ ಮನೆಗಳಲ್ಲಿಟ್ಟುಕೊಂಡು, ಅದರಲ್ಲಡಗಿರುವ ಸುಲಭ ಚಿಕಿತ್ಸೆಗಳನ್ನನುಸರಿಸಿದರೆ ರೋಗ ರುಜಿನಾದಿಗಳು ತಪ್ಪುವುವು.

ಶ್ರೀ ಶಿವಕುಮಾರಸ್ವಾಮಿಯವರಿಗೆ ನಮ್ಮ ಅಭಿನಂದನೆಗಳು.

---

## ಮಾತೃಭೂಮಿ, ೨೮ನೇ ಆಗಸ್ಟ್ ೧೯೫೩

............ ಆಯುರ್ವೇದ ಪದ್ಧತಿಯ ರೀತ್ಯಾ ನಿತ್ಯೋಪಯುಕ್ತವಾದ ಧಾನ್ಯಗಳ ಮತ್ತು ಇತರ ವಸ್ತುಗಳ ಗುಣದೋಷಗಳನ್ನೂ, ಆರೋಗ್ಯ ರಕ್ಷಣೆಯಲ್ಲಿ ಅವುಗಳ ಉಪಯೋಗಗಳನ್ನೂ ವಿವರಿಸುವ "ಆರೋಗ್ಯ ದರ್ಪಣ"ವೆಂಬ ಈ ಪುಸ್ತಕದ ಪ್ರಕಟಣೆಯು ಸಮಯೋಚಿತವೂ, ಉಪಯುಕ್ತವೂ ಆಗಿದೆ.

ಗ್ರಂಥಕರ್ತರಾದ ವೈದ್ಯ ಮಾರ್ತಂಡ, ಭಿಷಗ್ರತ್ನ ಪಂ॥ ಶಿವಕುಮಾರಸ್ವಾಮಿಗಳು ............ ತಮ್ಮ ವಿಶಾಲ ಅನುಭವವನ್ನೂ, ಸಂಸ್ಕೃತ ವೈದ್ಯ ಗ್ರಂಥಗಳಲ್ಲಿದ್ದ ಅನೇಕ ಉಪಯುಕ್ತ ವಿಚಾರಗಳನ್ನೂ ಸಂಗ್ರಹಿಸಿ ಕನ್ನಡ ಭಾಷೆಯಲ್ಲಿ ಗ್ರಂಥವನ್ನು ರಚಿಸಿ ಕನ್ನಡಿಗರಿಗೆ ಮಹದುಪಕಾರ ಮಾಡಿದ್ದಾರೆ. ಗ್ರಂಥದ ದೀರ್ಘವಾದ ಪೀಠಿಕೆಯು ಭಾರತದಲ್ಲಿ ಆಯುರ್ವೇದ ಮತ್ತು ಯುನಾನಿ ಪದ್ಧತಿಗಳ ಆವಿರ್ಭಾವ, ಇತಿಹಾಸಗಳನ್ನು ಕುರಿತ ವಿವರಗಳನ್ನೊಳಗೊಂಡಿದ್ದು, ಗ್ರಂಥಕರ್ತರ ವಿಶಾಲ ಪಾಂಡಿತ್ಯವನ್ನು ವ್ಯಕ್ತಪಡಿಸುವುದಾಗಿದೆ

ಆರೋಗ್ಯ ಮತ್ತು ವೈದ್ಯಕೀಯ, ಈ ಎರಡು ರೀತಿಯಿಂದಲೂ ಪುಸ್ತಕವು ಸಂಗ್ರಹ ಯೋಗ್ಯವಾಗಿರುತ್ತದೆ........ ಆಹಾರದ ಗುಣದೋಷ ಮತ್ತು ವಸ್ತು ಮೌಲ್ಯ (ಫುಡ್ ವ್ಯಾಲ್ಯು)ವನ್ನು ತಿಳಿಸುವ ಅನೇಕ ಪುಸ್ತಕಗಳು ಇಂಗ್ಲಿಷಿನಲ್ಲಿ ಪ್ರಕಟವಾಗಿರುವುವಾದರೂ ಅಂತಹ ಪುಸ್ತಕಗಳು ಕನ್ನಡದಲ್ಲಿರಲಿಲ್ಲ. ಆರೋಗ್ಯ ದರ್ಪಣವು ಆ ಲೋಪವನ್ನು ಪರಿಹರಿಸಿ, ಜನ ಸಾಮಾನ್ಯರ ಆಹಾರದ ಬಗೆಗೆ ಅನೇಕ ಉಪಯುಕ್ತವಾದ ಸಲಹೆ ಮತ್ತು "ಚುಟಕಾ"ಗಳನ್ನು ವಿವರಿಸಿದೆ.

ನಮ್ಮ ಜನರು ಆ ಸಲಹೆಗಳನ್ನು ಅನುಸರಿಸುವುದರಿಂದ ಮತ್ತು ಜನರಲ್ಲಿ ಅವುಗಳನ್ನು ಪ್ರಚಾರಗೊಳಿಸುವುದರಿಂದ ಜನಾರೋಗ್ಯ ರಕ್ಷಣೆಗೆ ಮಹದುಪಕಾರ ಮಾಡುವರೆಂದು ನಂಬಿದ್ದೇವೆ.

ಭಾರತೀಯರಲ್ಲಿ ಆಯುರ್ವೇದವು ತನ್ನ ಹಿಂದಿನ ಘನತೆಯನ್ನೂ ಉಚ್ಚ ಸ್ಥಾನವನ್ನೂ ಪುನಃ ಪಡೆಯಬೇಕಾದರೆ ಇಂತಹ ಗ್ರಂಥಗಳು ಜನರಲ್ಲಿ ಹೆಚ್ಚು ಪ್ರಚಾರವಾಗುವುದು ಅಗತ್ಯ........ ಪ್ರತಿಯೊಬ್ಬರೂ ಇಂತಹ ಅಮೂಲ್ಯ ಗ್ರಂಥವನ್ನು ತಮ್ಮಲ್ಲಿಟ್ಟುಕೊಳ್ಳುವುದು ಅಗತ್ಯ. ಗ್ರಾಮಾಂತರ ಪುಸ್ತಕ ಭಂಡಾರಗಳಲ್ಲಂತೂ ಇದ್ದೇ ತೀರಬೇಕು. ಪುಸ್ತಕ ಭಂಡಾರಗಳೂ, ಸ್ಥಾನಿಕ ಸಂಸ್ಥೆಗಳೂ ಈ ಗ್ರಂಥದ ಪ್ರಚಾರಕ್ಕೆ ಸಹಾಯ ಮಾಡುವುದು ಅಗತ್ಯವಾಗಿದೆ ........

---

## ವಿಶ್ವಕರ್ಣಾಟಕ, ೨೫ನೇ ಆಗಸ್ಟ್ ೧೯೪೩

........ ಬಹುಕಾಲ ಪಾಶ್ಚಾತ್ಯ ವೈದ್ಯದ ಮೋಹಕ್ಕೆ ಬಿದ್ದು ನಮ್ಮ ನಾಡು ಈಗಿನ ಆಯುರ್ವೇದದ ಉಪಯುಕ್ತತೆಯ ಕಡೆ ತನ್ನ ಕಣ್ಣು ತಿರುಗಿಸುತ್ತಿದೆ. ಆಯುರ್ವೇದೋದ್ಧಾರಕ್ಕಾಗಿ ಜನ ಪ್ರಯತ್ನಪಡುತ್ತಿದ್ದಾರೆ. ಇಂಥಹ ಗ್ರಂಥ ಈಗ ಪ್ರಕಟವಾಗುತ್ತಿರುವುದು ಶುಭಸೂಚನೆ. ಆಯುರ್ವೇದದದಲ್ಲಡಗಿರುವ ಅನೇಕ ವಿಧವಾದ ಸುಲಭ ಚಿಕಿತ್ಸೆಗಳನ್ನು ಜನರಲ್ಲಿ ಪ್ರಚಾರಮಾಡುವ ಉದ್ದೇಶದಿಂದ ಈ ಪುಸ್ತಕ ಬರೆಯಲ್ಪಟ್ಟಿದೆ.

........ ಮುಕ್ತಹಸ್ತರಾಗಿ ಕನ್ನಡಿಗರಿದನ್ನು ಪ್ರೋತ್ಸಾಹಿಸಬೇಕು; ವಿಷಯದ ಉಪಯುಕ್ತತೆಯೇ ನಾವು ಕೊಡುವ ಬೆಲೆಯು ಮೌಲ್ಯಕ್ಕೂ ಮಿಕ್ಕಿದ್ದು. ಇಂತಹ ಗ್ರಂಥವನ್ನು ಪ್ರಕಟಿಸಿ ಶ್ರೀ ಸ್ವಾಮಿಗಳು ಕನ್ನಡಿಗರ ಚಿರ ಕೃತಜ್ಞತೆಗೆ ಪಾತ್ರರಾಗಿದ್ದಾರೆ.

---

## ದೇಶಬಂಧು, ೯ನೇ ಆಗಸ್ಟ್ ೧೯೪೩

........ ಗ್ರಂಥದ ಹೆಸರು "ಆರೋಗ್ಯದರ್ಪಣ". ಸೊಗಸಾದ ಹೆಸರು! ಜನತೆಯ ಹಿತವನ್ನು ಕುರಿತು ಬರೆಯಲ್ಪಟ್ಟಿದೆ. ಶ್ರೀ ಶಿವಕುಮಾರಸ್ವಾಮಿಗಳ ಲೇಖನ ಸಾಮರ್ಥ್ಯ ಬಹಳ ಶ್ಲಾಘನೀಯವಾದುದು ...............

ತಮಗೆ ತಿಳಿದುದನ್ನು ಉಳಿದವರೂ ತಿಳಿಯಲಿ, ದೇಶಕ್ಕೆ ಆರೋಗ್ಯ ಲಭಿಸಲಿ,ಲೋಕ ಕಲ್ಯಾಣವಾಗಲಿ, ಎಂಬುದೇ ಶ್ರೀ ಶಿವಕುಮಾರಸ್ವಾಮಿಗಳ ಅಭಿಪ್ರಾಯ ಮತ್ತು ಅವರ ಉದಾರ ಮನೋಭಾವ. ಅದ್ದರಿಂದಲೇ ಇಂತಹ ಪವಿತ್ರವಾದ ಕಾರ್ಯಕ್ಕೆ ಕೈಹಾಕಿದ್ದಾರೆ. ಎಲ್ಲರೂ ಓದಬೇಕು, ನಲಿಯಬೇಕು ಇದನ್ನು. ಓದಿದವರು ತಾವೇ ವೈದ್ಯರಾಗುತ್ತಾರೆ.

ಶ್ರೀ ಶಿವಕುಮಾರಸ್ವಾಮಿಗಳು ಧನ್ವಂತರಿಯ ಪ್ರಸಾದ ಪಡೆದವರು; ಹೆಚ್ಚಿನ ಅನುಭವವುಳ್ಳವರು. ಇನ್ನೂ ಅನೇಕ ಗ್ರಂಥಗಳನ್ನು ಬರೆಯುವುದಾಗಿ ತಿಳಿಸಿದ್ದಾರೆ. ಅವು ಬೇಗನೆ ಪ್ರಕಟವಾಗಲೆಂದು ಹಾರೈಸುತ್ತೇವೆ.

ಶೈಲಿ ಬಹು ಸೊಗಸಾದುದು, ವೈದ್ಯದ ಮೇಲ್ಪಂಕ್ತಿಗಳನ್ನೇ ಕೊಡದೆ, ಆಹಾರ, ನಿದ್ರೆ, ತರಕಾರಿ, ಹಣ್ಣು ಮೊದಲಾದ ಹೆಸರುಗಳನ್ನೇ ಅಧ್ಯಾಯಗಳಿಗಿಟ್ಟು ತನ್ಮೂಲಕ ವೈದ್ಯಕ್ಕೆ ಸಂಬಂಧಿಸಿದ ಬಹು ವಿಷಯಗಳನ್ನು ಸರ್ವರಿಗೂ ಅರ್ಥವಾಗುವಂತೆ ವಿವರಿಸಿದ್ದಾರೆ.

ನವನಾಗರಿಕತೆಯ ಸೋಂಕಿಗೆ ಬಿದ್ದ ತರುಣ ತರುಣಿಯರಿಗೆ ಅವಶ್ಯಕವಾದ ಹಲ್ಲುಪುಡಿ, ಹೇರ್‌ಆಯಿಲ್ ಮೊದಲಾದವುಗಳನ್ನು ತಯಾರಿಸುವ ಕ್ರಮಗಳನ್ನು ವಿಶದಪಡಿಸಿದ್ದಾರೆ. ಸ್ತ್ರೀ ಪುರುಷರಿಗೆ ಅತ್ಯುಪಯುಕ್ತವಾದ ಔಷಧಗಳ ವಿಷಯವನ್ನೂ ವಿವರಿಸಿ, ಅವುಗಳಿಂದಾಗುವ ಸುಫಲಗಳನ್ನು ಬಹಳ ಸೊಗಸಾಗಿ ಚಿತ್ರಿಸಿರುತ್ತಾರೆ. ಒಟ್ಟಿನಲ್ಲಿ ಎಲ್ಲರೂ ಓದಬೇಕಾದ ಪುಸ್ತಕ.

---

## ಪ್ರಜಾಮತ, ೨೫ನೇ ಆಗಸ್ಟ್ ೧೯೪೫

........ ಆಯುರ್ವೇದ ಶಾಸ್ತ್ರದ ಹುಟ್ಟುಬೆಳವಣಿಗೆಗಳನ್ನೂ, ಕಾಲಚಕ್ರದ ಉರುಳುವಿಕೆಯಲ್ಲಿ ಅದರ ಉನ್ನತಿ–ಅವನತಿಗಳನ್ನೂ ಗ್ರಂಥಕರ್ತರು ಸಯುಕ್ತಿಕವಾಗಿ ಸುದೀರ್ಘವಾದ ಮುನ್ನುಡಿಯಲ್ಲಿ ವಿವರಿಸಿದ್ದಾರೆ. ಅನೇಕ ಜನ ಪಾಶ್ಚಾತ್ಯ ಪಂಡಿತರು ಆಯುರ್ವೇದದ ಬಗೆಗೆ ಪ್ರಶಂಸಿಸಿರುವುದನ್ನೂ ಸೂಕ್ಷ್ಮವಾಗಿ ಕೊಟ್ಟಿದ್ದಾರೆ.

ಅಂಗಡಿಗಳಲ್ಲಿಯೂ ಮನೆಗಳಲ್ಲಿಯೂ ದೊರೆಯುವ ಕೇವಲ ಸಾಮಾನ್ಯ ಪದಾರ್ಥಗಳಿಂದ ಆರೋಗ್ಯವನ್ನು ಹೇಗೆ ರಕ್ಷಿಸಿಕೊಳ್ಳಬಹುದೆಂಬುದನ್ನೂ, ಅವುಗಳಿಂದ ರೋಗಗಳನ್ನು ಹೇಗೆ ಪರಿಹರಿಸಿಕೊಳ್ಳಬಹುದೆಂಬುದನ್ನೂ ಗ್ರಂಥದಲ್ಲಿ

ವಿವರಿಸಲಾಗಿದೆ. "ಹಿತ್ತಲ ಗಿಡ ಮದ್ದಲ್ಲ" ಎಂಬುದು ತಿಳಿಗೇಡಿತನದ ಅಭಿಪ್ರಾಯ ವೆಂಬುದು ಈ ಪುಸ್ತಕದಿಂದ ವಿದಿತವಾಗುತ್ತೆ. ಜನಸಾಮಾನ್ಯರು ಈ ಗ್ರಂಥದಿಂದ ಹೇರಳವಾದ ಪ್ರಯೋಜನ ಪಡೆಯಬಹುದಾಗಿದೆ. ಶೈಲಿಯು ಸುಲಭವಾಗಿದೆ. ಶ್ರೀ ಸ್ವಾಮಿಗಳು ತಮ್ಮ ಜ್ಞಾನ ಭಂಡಾರವನ್ನು ಈ ಪುಸ್ತಕದಲ್ಲಿ ಸೂರೆಗೈದಿದ್ದಾರೆ. ಕನ್ನಡಿಗರು ಇವರಿಗೆ ಉತ್ತೇಜನ ಕೊಟ್ಟು, ಇವರಿಂದ ಇಂತಹ ಇನ್ನೂ ಹಲವಾರು ಗ್ರಂಥಗಳು ರಚಿಸಲ್ಪಡಲೆಂದು ಹಾರೈಸುತ್ತೇವೆ.

---

## ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಜೂನ್-ಸೆಪ್ಟೆಂಬರ್ ೧೯೪೩

........ ಗ್ರಂಥಕರ್ತರು ಕಾಶಿಯಲ್ಲಿ ದೀರ್ಘ ಕಾಲ ಅಧ್ಯಯನ ಮಾಡಿ ಆಯುರ್ವೇದ ಮತ್ತು ಸಂಸ್ಕೃತ ಸಾಹಿತ್ಯಗಳಲ್ಲಿ ಪಾಂಡಿತ್ಯ ಪಡೆದವರು. ಅಷ್ಟು ಮಾತ್ರವಲ್ಲದೆ ಉತ್ತರ ಹಿಂದೂಸ್ಥಾನದ ಸುಪ್ರಸಿದ್ಧ ವೈದ್ಯರ ಸಹವಾಸದಲ್ಲಿದ್ದು ಅವರ ಅನುಭೂತ ಚಿಕಿತ್ಸಾ ಪ್ರಯೋಗಗಳನ್ನೂ ಸಂಗ್ರಹಿಸಿರುವರು. ಹೀಗೆ ತಮ್ಮ ವಿದ್ವತ್ತು, ಅನುಭೂತಯೋಗ ಸಂಗ್ರಹಗಳು ಮತ್ತು ಹಲವು ಗ್ರಂಥ ಪರಿಶೋಧನೆಗಳ ಆಧಾರದಿಂದ ಈ ಗ್ರಂಥವನ್ನು ಪಂಡಿತ ಶ್ರೀ ಶಿವಕುಮಾರ ಸ್ವಾಮಿಗಳು ರಚಿಸಿರುವರು. ಸುದೀರ್ಘವಾದ ೪೮ ಪುಟಗಳ ಪೀಠಿಕೆಯಲ್ಲಿ, ಆಯುರ್ವೇದೋತ್ಪತ್ತಿ, ಆಯುರ್ವೇದ ಗ್ರಂಥಗಳು, ಆಯುರ್ವೇದದ ಉನ್ನತಿ–ಅವನತಿಗಳ ಕಾರಣಗಳು ಇವೇ ಮೊದಲಾದ ವಿಷಯುಗಳ ಸಂಕ್ಷಿಪ್ತ ಪರಿಚಯವನ್ನು ಅವರು ಕೊಟ್ಟಿರುವರು. ಮತ್ತೆ ಇದರಲ್ಲಿ ಮನುಷ್ಯನು ಬೆಳಿಗ್ಗೆ ಎದ್ದು ತನ್ನ ಆರೋಗ್ಯ ರಕ್ಷಣೆಗಾಗಿ ಮಾಡಬೇಕಾದ ಉಷಃಪಾನ ಮೊದಲ್ಗೊಂಡು ರಾತ್ರಿ ಅವನು ಮಲಗುವವರೆಗೆ ಅನುಸರಿಸಬೇಕಾದ ವಿಚಾರಗಳು, ವೃದ್ಧಾಚಾರ ಮತ್ತು ಆರ್ಷಗ್ರಂಥ ಪರಿಪಾಠಗಳಿಗೆ ಲೋಪಬಾರದಂತೆ ಸಯುಕ್ತಿಕವಾಗಿ ಸುಸಂಗತವಾಗಿ ವಿವರಿಸಲ್ಪಟ್ಟಿವೆ. ಇವುಗಳೊಂದಿಗೆ ನಾವು ಆಹಾರವಾಗಿ ಬಳಸುವ ಅನೇಕ ಪದಾರ್ಥಗಳನ್ನು ಹೇಗೆ ಔಷಧ ರೂಪವಾಗಿ ಉಪಯೋಗಿಸಬಹುದೆಂದು ತಿಳಿಸಲು ನೂರಾರು ಅನುಭೂತ ಯೋಗಗಳನ್ನೂ ಕೊಡಲಾಗಿದೆ. ಆದ್ದರಿಂದ 'ಆರೋಗ್ಯ ದರ್ಪಣ'ವೆಂಬ ಹೆಸರನ್ನು ನೋಡಿ, ಈ ಗ್ರಂಥವು ಪಾಠಶಾಲೆಗಳಲ್ಲಿ ಬೋಧಿಸುವ ಆರೋಗ್ಯಶಾಸ್ತ್ರ ಪ್ರತಿಪಾದಕ ಗ್ರಂಥವೆಂದು ತಿಳಿಯಕೂಡದು. ಭಾರತೀಯ ಸದಾಚಾರ, ಸಂಸ್ಕೃತಿ, ಶೌಚವಿಧಿ, ದಂತಶೋಧನೆ, ವ್ಯಾಯಾಮ, ಅಭ್ಯಂಗ, ಸ್ನಾನ, ದೇವತಾರ್ಚನಾದಿ ದಿನಚರ್ಯೆಗಳ ಪ್ರತಿಪಾದನೆಯೊಂದಿಗೆ, ಹಲವಾರು ರೋಗಗಳಿಗೆ ಸಾವಿರಾರು ಪ್ರಯೋಗಸಿದ್ಧ ಚಿಕಿತ್ಸಾಯೋಗಗಳನ್ನು ಹಲವು

ಗ್ರಂಥಗಳಿಂದಲೂ ಸ್ವಾನುಭವದಿಂದಲೂ ಸಂಗ್ರಹಿಸಿ ಇದರಲ್ಲಿ ಕೊಡಲಾಗಿದೆ. ಆದ್ದರಿಂದ ಈ ಗ್ರಂಥಕ್ಕೆ "ಆಯುರ್ವೇದಿಯ ಸುಲಭ ಚಿಕಿತ್ಸಾ ಕೋಶ"ವೆಂಬ ಹೆಸರಿಡಬಹುದಾಗಿದೆ ...............

ನಮ್ಮ ಮುಂದಿರುವ ಪಂಡಿತ ಶಿವಕುಮಾರಸ್ವಾಮಿಗಳ 'ಆರೋಗ್ಯದರ್ಪಣ' ದಂತಹ ಗ್ರಂಥಗಳು ಹೇರಳವಾಗಿ ಹುಟ್ಟಿ, ಕನ್ನಡ ಮಹಿಳೆಯರು ಅವನ್ನು ಓದಿ, ಮನನಮಾಡಿ, ಮೈಗೂಡಿಸಿಕೊಳ್ಳಬೇಕು. ಪಂಡಿತ ಶಿವಕುಮಾರಸ್ವಾಮಿಗಳು ಶಾಸ್ತ್ರವಿವೇಚನೆಯ ಗೊಂದಲಕ್ಕೆ ಹೋಗಿಲ್ಲ. ನಮ್ಮ ದೇಶ, ಕಾಲ, ಪರಿಸ್ಥಿತಿಗಳಿಗೆ ಅನುಸಾರವಾಗಿ, ನಮ್ಮ ದೇಶದ, ನಮ್ಮ ಮನೆಯಲ್ಲೇ ನಿತ್ಯವೂ ನಾವು ಉಪಯೋಗಿಸುವ ಆಹಾರ ವಸ್ತುಗಳು, ತರಕಾರಿಗಳು ಮೊದಲಾದವುಗಳನ್ನು ಎಂತೆಂತಹ ಮಹಾರೋಗ ನಿವಾರಣೆಗೆ ಔಷಧಿ ರೂಪವಾಗಿ ಉಪಯೋಗಿಸಬಹುದೆಂದು, ಅಬಾಲವೃದ್ಧರಿಗೂ ತಿಳಿಯುವಂತೆ ಸರಳವೂ ಸುಲಭವೂ ಆದ ಶೈಲಿಯಲ್ಲಿ ಬರೆದಿದ್ದಾರೆ. ಇದು ಕನ್ನಡನಾಡಿನ ಪ್ರತಿಯೊಂದು ಸಂಸಾರದಲ್ಲಿಯೂ ಅತ್ಯಗತ್ಯವಾಗಿ ಇರಬೇಕಾದ ಗ್ರಂಥರತ್ನವಾಗಿದೆ. ಪಂಡಿತರು ಪ್ರಕಟಿಸಬೇಕೆಂದಿರುವ ಆಯುರ್ವೇದೀಯ ಗ್ರಂಥಮಾಲೆಯ ಇತರ ಪುಷ್ಪಗಳೂ ಅರಳಿ, ಕನ್ನಡನಾಡಿನವರೆಲ್ಲರಿಗೂ ಆಯುರಾರೋಗ್ಯಭಾಗ್ಯವನ್ನೀಯುವಂತೆ ಆಗಲೆಂದು ಹಾರೈಸುವೆವು.

ಡಿ. ಕೆ. ಭಾರದ್ವಾಜ.

---

## ಜನವಾಣಿ, ೨೩ನೇ ಆಗಸ್ಟ್ ೧೯೪೩

....... ಪಂ॥ ಶಿವಕುಮಾರಸ್ವಾಮಿಗಳು ಸುಲಭ ಶೈಲಿಯಲ್ಲಿ ಪಂಡಿತ ಪಾಮರರಿಗೆ ಅರ್ಥವಾಗುವಂತೆ, ಸುಲಭಚಿಕಿತ್ಸೆ ಅನುಪಾನಗಳನ್ನು ವರ್ಣಿಸಿದ್ದಾರೆ. ಈ ಚಿಕಿತ್ಸೆಗಳು ಪಂ॥ ಶಿವಕುಮಾರಸ್ವಾಮಿಗಳ ೧೬ ವರ್ಷ ಆಯುರ್ವೇದ ವೈದ್ಯದ ಅಧ್ಯಯನದ ಫಲಿತಾಂಶ; ಎಂದಮೇಲೆ, ಈ ಚಿಕಿತ್ಸೆಗಳ ಸತ್ವವು ಎಷ್ಟಿರಬೇಕೆಂಬುದನ್ನು ವಾಚಕರೇ ಗ್ರಹಿಸಬಹುದು. ಆಯುರ್ವೇದದ ಗುಟ್ಟನ್ನು ರಟ್ಟು ಮಾಡಕೂಡದೆಂಬ ಮೂಢಭಕ್ತಿಗೆ ಶರಣಾಗದೆ ಪಂಡಿತ ಶಿವಕುಮಾರಸ್ವಾಮಿಗಳು ಆಯುರ್ವೇದ ವೈದ್ಯದ ತಿರುಳನ್ನು ಸಾರ್ವಜನಿಕರ ಮುಂದಿಟ್ಟಿದ್ದಾರೆ. ತಮ್ಮ ಪ್ರಯತ್ನದಿಂದ ಪಂ॥ ಶಿವಕುಮಾರಸ್ವಾಮಿಗಳು ಆಯುರ್ವೇದದ ಪುನರುದ್ಧಾರಕ್ಕೆ ಮಹೋಪಕಾರ ಮಾಡಿರುವರಲ್ಲದೆ, ಜನಸಾಮಾನ್ಯರಲ್ಲಿ ಆಯುರ್ವೇದದ ಬಗೆಗೆ ಅಭಿಮಾನವೂ ಸ್ಫೂರ್ತಿಯೂ ಉಂಟಾಗಲು ಉತ್ತಮ ಸೇವೆಗೈದಿದ್ದಾರೆ.

....... ರೋಗರುಜಿನಗಳಿಂದಲೂ, ಅಜ್ಞಾನದಿಂದಲೂ, ತುಂಬಿ ತುಳುಕಾಡುತ್ತಿರುವ ಭಾರತದ ಇಂದಿನ ಪರಿಸ್ಥಿತಿಯಲ್ಲಿ ಪಂ॥ ಶಿವಕುಮಾರಸ್ವಾಮಿಗಳಂಥವರು ಕೈಗೊಂಡಿರುವ ಸ್ತುತ್ಯಕಾರ್ಯಕ್ಕೆ ಸರ್ವ ಬಗೆಯ ಪ್ರೋತ್ಸಾಹ ದೊರೆಯಬೇಕಾದುದು ಉಚಿತ ...........

## ಕಂಠೀರವ, ೩೧ನೇ ಅಗಸ್ಟ ೧೯೪೩

........ ಈ ಗ್ರಂಥದಲ್ಲಿ ಆಯುರ್ವೇದಾನುಸಾರವಾಗಿ ಆರೋಗ್ಯ ರಕ್ಷಣೆಯನ್ನು ಹೇಗೆ ಮಾಡಿಕೊಳ್ಳತಕ್ಕುದೆಂದು ಸವಿಸ್ತಾರವಾಗಿ ವಿವರಿಸಲಾಗಿದೆ. ೪೮ ಪುಟಗಳ ಪೀಠಿಕೆಯಲ್ಲಿ ಆಯುರ್ವೇದೋತ್ಪತ್ತಿ ಮೊದಲಾದ ವಿಚಾರಗಳಲ್ಲಿ ಗ್ರಂಥಕರ್ತರು ವಿದ್ವತ್ಪೂರ್ಣವಾದ ಜಿಜ್ಞಾಸೆಯನ್ನು ನಡೆಸಿ ಆಯುರ್ವೇದದ ಮಹತ್ವವನ್ನು ಪ್ರಕಾಶಗೊಳಿಸಿರುತ್ತಾರೆ. ಈ ಗ್ರಂಥವು ಶೌಚವಿಧಿ ದಂತಶೋಧನೆ, ವ್ಯಾಯಾಮ, ತೈಲಾಭ್ಯಂಗ, ಸ್ನಾನ, ಆಹಾರ ನಿಯಮ ಇತ್ಯಾದಿ ಯಾವತ್ತು ಆರೋಗ್ಯ ವಿಚಾರಗಳನ್ನು ಒಳಗೊಂಡಿದ್ದು, ಮನುಷ್ಯನು ದೀರ್ಘಾಯುವಾಗಿ ಆರೋಗ್ಯವಂತನಾಗಿ ಬಾಳಬೇಕಾದರೆ ಯಾವ ರೀತಿಯಿಂದ ಜೀವನ ಸಾಗಿಸಬೇಕೆಂಬುದನ್ನು ಕುರಿತು ಕಂಠೋಕ್ತವಾದ ಸೂಚನೆಗಳನ್ನೂ ಕೊಡುತ್ತದೆ ............

---

## ಕರ್ಮವೀರ, ೩೧ನೇ ಜನವರಿ ೧೯೪೪

........ ಪಂಡಿತರು ಈ ಗ್ರಂಥದಲ್ಲಿ ಆಯುರ್ವೇದದ ಪ್ರಾಚೀನತೆಯನ್ನೂ ಶ್ರೇಷ್ಠತೆಯನ್ನೂ ಅದರ ಈಗಿನ ಸ್ಥಿತಿಯನ್ನೂ ಕೂಲಂಕಷವಾಗಿ ವಿವೇಚಿಸಿ, ಮನುಷ್ಯನು ತನ್ನ ಆರೋಗ್ಯವನ್ನು ಕಾಯ್ದುಕೊಳ್ಳಲು ಆಚಾರ ವಿಚಾರ ಆಹಾರ ಮೊದಲಾದವುಗಳಲ್ಲಿಯ ಯಾವಾವ ಮುಂಜಾಗ್ರತೆ ವಹಿಸುವುದು ಅವಶ್ಯವಿದೆಯೆಂಬುದನ್ನು ಸುಲಭವಾದ ಶೈಲಿಯಲ್ಲಿ ತಿಳಿಸಿಕೊಟ್ಟಿದ್ದಾರೆ. ಬೇರೆ ಬೇರೆ ಆಹಾರ ವಸ್ತುಗಳ ಗುಣಧರ್ಮಗಳು ಇದರಲ್ಲಿ ವಿವರಿಸಲ್ಪಟ್ಟಿದ್ದರಿಂದ ಅವುಗಳಿಂದಾಗುವ ಹಿತಾಹಿತಗಳು ಪ್ರತಿಯೊಬ್ಬರಿಗೂ ಅವಗತವಾಗುವಂತಿದೆ. ಕನ್ನಡದಲ್ಲಿ ಈ ಬಗೆಯ ಗ್ರಂಥಗಳು ತೀರ ವಿರಳವಿರುವವು ................ ಶ್ರೀ ಶಿವಕುಮಾರಸ್ವಾಮಿಗಳು ತಮ್ಮ ಪಾಂಡಿತ್ಯ ಹಾಗು ಅನುಭವಯುಕ್ತವಾದ ಈ ಗ್ರಂಥ ಪ್ರಕಟಿಸಿ ಜನಸಾಮಾನ್ಯರಿಗೆ ಹೆಚ್ಚಿನ ಉಪಕಾರ ಮಾಡಿರುವರು ............ ಸ್ತ್ರೀಯರಿಗೂ ಹಳ್ಳಿಗರಿಗೂ ಇದು ಒಳ್ಳೆ ಉಪಯುಕ್ತ ಗ್ರಂಥವಾಗಿರುವದು. ನಮ್ಮ ಸುತ್ತು ಮುತ್ತು ದೊರೆಯುವ ವನಸ್ಪತಿಗಳಿಂದ ಮಹಾರೋಗಗಳನ್ನು ಸಹಾ ನಿವಾರಿಸಿಕೊಳ್ಳುವದು ಶಕ್ಯವಿದೆಯೆಂಬುದು ಈ ಗ್ರಂಥದಿಂದ ಕಂಡುಬರುವುದು. ಎಲ್ಲರೂ ಇತ್ತ ಲಕ್ಷ್ಯ ಹಾಕಿ ವನಸ್ಪತಿಗಳ ಗುಣಧರ್ಮಗಳ ಜ್ಞಾನ ಮಾಡಿಕೊಂಡಲ್ಲಿ ಮನೆಯಲ್ಲಿಯೇ ವೈದ್ಯಕಿ ಸಾಗಿಸಲು ಬರುವದು. ಕನ್ನಡಿಗರು ಪಂಡಿತರಿಗೆ ಯೋಗ್ಯ ಪ್ರೋತ್ಸಾಹ ಕೊಟ್ಟು ಅವರು ಪ್ರಕಟಿಸಬೇಕೆಂದು ಆಲೋಚಿಸಿರುವ ಈ ಬಗೆಯ ಇನ್ನೂ ಕೆಲವು ಗ್ರಂಥಗಳು ಅವಶ್ಯ ಹೊರಬೀಳುವಂತೆ ಮಾಡಬೇಕು.

## ಉಷಾ, ಅಕ್ಟೋಬರ್ ೧೯೪೩

........ ಶ್ರೀಗಳವರು ಈ ಗ್ರಂಥಕ್ಕೆ ಅನುಭವಯುಕ್ತವೂ ವಿದ್ವತ್ಪೂರ್ಣವೂ ಆದ ೪೪ ಪುಟಗಳ ದೀರ್ಘವಾದ ಪೀಠಿಕೆಯನ್ನು ಬರೆದಿದ್ದಾರೆ. ಆಯುರ್ವೇದ ಶಾಸ್ತ್ರದ ಪ್ರಾಚೀನತೆಯನ್ನೂ ಶ್ರೇಷ್ಠತೆಯನ್ನೂ ವೈಶಿಷ್ಟ್ಯವನ್ನೂ ತಿಳಿಯಲು ಈ ಪೀಠಿಕೆಯು ಅತ್ಯಂತ ಸಹಾಯಕವಾಗಿದೆ.

ಕೊನೆಯಲ್ಲಿ ಯಾವ ಯಾವ ಆಹಾರ ವಸ್ತುಗಳಲ್ಲಿ ಎಷ್ಟೆಷ್ಟು ಪ್ರಮಾಣದಲ್ಲಿ ಆಹಾರ ಸತ್ವಗಳಿರುತ್ತವೆ, ಎಂಬುದನ್ನು ತಿಳಿಸುವ "ಆಹಾರಾಂಶಗಳ ಪಟ್ಟಿ" ಯನ್ನೂ ಕೊಟ್ಟಿದ್ದಾರೆ.

ಪ್ರತಿಯೊಬ್ಬರ ಮನೆಯಲ್ಲಿಯೂ ಸಣ್ಣಪುಟ್ಟ ರೋಗ ರುಜಿನಗಳಿಗಾಗಿ ವೈದ್ಯಶಾಲೆಗಳಿಗೆ ಯಾತ್ರೆಮಾಡುತ್ತಿರುವ ಈ ಕಾಲದಲ್ಲಿ ಈ ಗ್ರಂಥವು ಪ್ರಕಟವಾಗಿರುವುದು ಮಹೋಪಕಾರವೆಂದೇ ಹೇಳಬೇಕಾಗಿದೆ.

ಹಳ್ಳಿಗಳಲ್ಲಿಯೂ ನಗರಗಳಲ್ಲಿಯೂ ವೈದ್ಯವೃತ್ತಿಯಿಂದ ಜೀವಿಸುವವರಿಗೂ ಈ ಗ್ರಂಥವು ಅತ್ಯಂತ ಸಹಾಯಕಾರಿಯಾಗಿದೆ.

ಶ್ರೀಗಳವರು ಶ್ರೀ ಕಾಶೀಕ್ಷೇತ್ರದಲ್ಲಿ ಬಹುಕಾಲ ವಾಸಮಾಡಿ ಆಯುರ್ವೇದ ಶಾಸ್ತ್ರವನ್ನು ಮಾತ್ರವಲ್ಲದೆ, ತರ್ಕಶಾಸ್ತ್ರ, ವೇದಾಂತಶಾಸ್ತ್ರಗಳನ್ನೂ ಅಧ್ಯಯನ ಮಾಡಿ, ಎದುರಿಲ್ಲದ ಪಂಡಿತರಾಗಿರುವುದರಿಂದ ಈ ಗ್ರಂಥರಚನೆಯ ವಿಷಯವಾಗಿ ಇವರಿಗಿರುವ ಯೋಗ್ಯತಾಸಿದ್ಧಿಯನ್ನು ಯಾರೂ ಹೆಚ್ಚು ವಿವರಿಸಬೇಕಾಗಿಲ್ಲ ....

---

## ಶರಣಸಾಹಿತ್ಯ, ಸೆಪ್ಟಂಬರ್ ೧೯೪೩

............ ನಮಗೆ ತಿಳಿದಿರುವ ಮಟ್ಟಿಗೆ ಜೀವನದಲ್ಲಿ ಪ್ರತಿನಿತ್ಯವೂ ಉಪಯೋಗವಾಗತಕ್ಕ ಆರೋಗ್ಯ ವಿಚಾರಗಳನ್ನು ಇಷ್ಟು ಸಂಗ್ರಹವಾಗಿ, ಸ್ವಾರಸ್ಯವಾಗಿ ಕನ್ನಡದಲ್ಲಿ ಬರೆದಿರುವ ಪುಸ್ತಕ ಇಲ್ಲವೇ ಇಲ್ಲವೆಂದು ಹೇಳಬಹುದು. ಶ್ರೀ ಸ್ವಾಮಿಗಳು ದೊಡ್ಡ ಸಂಸ್ಕೃತ ವಿದ್ವಾಂಸರು. ಹಾಗೂ ಆಯುರ್ವೇದ ಪಂಡಿತರು. ಅವರು ಕನ್ನಡ ನಾಡು ನುಡಿಗಳ ಪ್ರೇಮದಿಂದ ಇಂತಹ ಮಹತ್ವದ ಪುಸ್ತಕವನ್ನು ಬರೆದು ಕನ್ನಡಿಗರಿಗೆ ಮಹೋಪಕಾರ ಮಾಡಿರುತ್ತಾರೆ. ಪ್ರತಿಯೊಬ್ಬ ಕನ್ನಡಿಗನೂ, ಆರೋಗ್ಯಪ್ರೇಮಿಯೂ, ಆಯುರ್ವೇದದ ಅಭಿಮಾನಿಯೂ ಈ ಪುಸ್ತಕವನ್ನು ಸಂಗ್ರಹಿಸಿ, ಓದಿ ಇದರ ಪ್ರಯೋಜನವನ್ನ ಪಡೆಯಬೇಕೆಂದು ನಾವು ಕೋರುತ್ತೇವೆ. ಪೂಜ್ಯ ಸ್ವಾಮಿಜಿಯವರು ಇಂತಹ ಇನ್ನೂ ಅನೇಕ ಗ್ರಂಥಗಳನ್ನು ಬರೆದು ತಮ್ಮ ಜ್ಞಾನಾನುಭವಗಳನ್ನ ನಾಡಿನ ಪ್ರಯೋಜನಕ್ಕೆ ಧಾರೆಯೆರೆಯಬೇಕೆಂದು ನಾವು ಪ್ರಾರ್ಥಿಸುತ್ತೇವೆ.

## ಸುಬೋಧ, ಅಕ್ಟೋಬರ್ ೧೯೪೩

........ ಈ ಗ್ರಂಥದಲ್ಲಿ ಅಯುರ್ವೇದ ವಿಷಯ ನಿರೂಪಣೆ ಮಾಡಿ,ತರುವಾಯ ಸರ್ವರ ಮನೆಗಳಲ್ಲೂ ಸಾಮಾನ್ಯವಾಗಿ ದೊರಕಬಹುದಾದ ಅಕ್ಕಿ, ಗೋಧಿ, ತೊಗರಿ, ಹೆಸರು, ಕಡಲೆ, ಕೊತ್ತುಂಬರಿ, ಅನೇಕ ಬಗೆಯ ಕಾಯಿಪಲ್ಯ ವಸ್ತುಗಳು ಇವುಗಳ ಸಕಲ ಗುಣದೋಷಗಳನ್ನೂ, ರೋಗನಿವಾರಕ ಸಾಮರ್ಥ್ಯವನ್ನೂ ವಿಸ್ತಾರವಾಗಿ ವರ್ಣಿಸಿರುವುದಲ್ಲದೆ ಇವುಗಳಲ್ಲಿ ಒಂದೊಂದು ಪದಾರ್ಥವೂ ರೋಗನಿವಾರಣಾ ವಿಚಾರದಲ್ಲಿ ಹೇಗೆ ಉಪಯೋಗವಾಗಬಹುದೆಂಬುದನ್ನೂ ವಿಸ್ತಾರವಾಗಿ ತಿಳಿಯಪಡಿಸಿದ್ದಾರೆ. ಒಂದೊಂದು ರೋಗಕ್ಕೂ ಅನೇಕ ಬಗೆಯ ಚಿಕಿತ್ಸೆಗಳನ್ನು ಸೂಚಿಸಿರುವುದೂ ಬಹು ಸಹಾಯಕವಾಗಿದೆ. ಇಂತಹ ಗ್ರಂಥವೊಂದು ಕನ್ನಡದಲ್ಲಿ ದೊರೆಯುವಂತಾದುದು ಅತಿಶಯ ಲೊಕೋಪಕಾರವಾಯಿತೆನ್ನಲು ಸಂದೇಹವಿಲ್ಲ.

ಕಾಶಿಯಲ್ಲಿ ವಿದ್ಯಾಭ್ಯಾಸಮಾಡಿ ವಿಶೇಷ ಪಾಂಡಿತ್ಯಗಳಿಸಿರುವ ಈ ಮಹನೀಯರು ಪ್ರಾರಂಭದಲ್ಲಿ ಆಯುರ್ವೇದೋತ್ಪತ್ತಿ ವಿಚಾರವನ್ನು ಕುರಿತು ಸುಮಾರು ನಾಲ್ವತ್ತೆಂಟು ಪುಟಗಳಷ್ಟು ವಿಸ್ತಾರವಾದ ಉಪೋದ್ಘಾತವನ್ನು ಬರೆದು, ಸಕಲ ಆಯುರ್ವೇದ ಪ್ರಾಚೀನ ಗ್ರಂಥಗಳ ಪರಿಚಯವನ್ನು ಒದಗಿಸಿಕೊಟ್ಟಿರುವುದು ಬಹು ಸಹಾಯಕವಾಗಿದೆ. ............

---

## THE "HINDU"

July 16, 1944

*Arogyadarpana* : By Ayurvedacharya Pandit Sri Sivakumara Swamigal. (Manager, Mrutyunjaya Oushadalaya Kottige Lane. B-City.

This is an Ayurvedic Treatise on Health and Hygiene written in Kanarese. It opens with a historical introduction of 48 pages dealing with the original source-books of Ayurveda, its great past, the causes of its decline in the recent past and the hopeful signs for its renaissance that are now evident everywhere.......................
The particulars regarding the actions and uses

of specific articles of food and drink in common use in this country are next dealt with in the succeeding portion of over 200 pages forming nearly two-thirds of the entire work. Much useful and valuable information is given in this portion in regard to the following subjects: cereals like rice, wheat, barley, millets, etc., pulses and the grams like thuvardhal, black gram, green gram, Bengal gram, etc., Indian vegetables of all kinds including leafy and root vegetables; Gourds, Cucumbers, Lentils, etc. Fruits and nuts commonly available in the country; and milk and milk products including Butter and Ghee. Finally come instructions relating to the properties and the uses of the different kinds of natural waters and the purification of impure water ........................ The author has relied everywhere on authoritative texts and traditions tested in many cases by actual experience. Another very valuable feature of the work is the inclusion of instructions relating to the preparation and use of many household remedies from articles of food and drink, commonly available in the generality of Indian homes. ............................ The learned author has placed both laymen and physicians conversant with Kanarese under a deep debt of gratitude by the publication of this very useful and instructive volume. It is gathered that its author has planned to publish a series of Ayurvedic Works in Kanarese under the general title Ayurveda Granthamala and that the Treatise under Review is the first volume of the proposed series. The excellence of the present

publication makes one eagerly wish for the early publication of the succeeding volumes of the series though such a wish may seem very difficult of realization in these days of acute paper famine. G.S.M.

---

"SUNDAY TIMES", October 17, 1943.

*Arogyadarpana*: By Pandit Shivakumara Swamy is perhaps the first book of its kind in Kanarese, which gives in exhaustive detail Ayurvedic and other tested remedies for the common ailments of mankind.

The author is a famous Ayurvedic physician of Bangalore and is best fitted to write on the subject. The book is well-planned with a useful index so that it is possible to reffer to any particular item without much difficulty.

The medicinal aspect of all the common food-stuffs is dicussed in the book and it is no exaggeration to say that many of the common ailments can be cured without going to the doctor by simply following the instructions in the book In short, the book is something like a home doctor.

There are hundreds of easy remedies in the book, which will help one not only fight diseases and pain but also to keep healthy and fit.

---

THE "INDIAN EXPRESS" Sept., 22, 1943

*Arogyadarpana*: By Pandit Sivakumaraswamigal, Kottigey Lane, Bangalore City.

In this handy volume written in simple style the author sets forth the ancient Hindu scientific rules of health. Food being the chiet sustainer of life. It is essential that people should have a thorough knowledge of the nutritive and medicinal values of edible articles. The bulk of this volume treats of this subject. In the introductory portion the author traces the history of Ayurveda. With proper care, the author holds, there is no reason why one should not live one century.

---

M. RAMACHANDRAN, Esq., M.B-B.S..F.I.M.

(Principal, Govt. Ayurvedic and Unani College and Hosipitals, Mysore)

I have perused with pleasure the publication entitled "Arogya Darpana" written in Kannada by Ayurvedacharya Pandit Sri Sivakumara Sawmigalu of Bangalore City ..................

The book opens with a historical introduction in which the origin, progress and decline of Ayurveda are briefly considered and then pass on to a description of the Ways and Laws of Health supported by quotations from standard Ayurvedic Works and the Upanishadas, etc. The bulk of the book is devoted to a consideration of the nutritional and medicinal properties of the dietetic articles that are in common and daily use in our country. Simple and useful prescriptions are given for ordinary ailments under each of these articles.

I would earnestly plead for the revival of the Sadachara contained in Ayurvedic texts and the daily rules of conduct enjoined by Sanathana Dharma. With this end in view I heartily commend this useful publication.

28th July, 1943 M. Ramachandran.

---

ಭಿಷಕ್ಚೂಡಾಮಣಿ, ಆಯುರ್ವೇದ ವಿದ್ವಾನ್

**ಡಾಕ್ಟರ್ ವೈ. ಲಕ್ಷ್ಮೀನರಸಿಂಹಶಾಸ್ತ್ರಿಗಳು,** ಎಲ್.ಎಂ.ಪಿ.

ರಿಟೈರ್ಡ್ ಸೂಪರಿಂಟೆಂಡೆಂಟ್, ಗೌ|| ಆಯುರ್ವೇದಿಕ್ ಆಸ್ಪತ್ರೆ ಮತ್ತು ಫಾರ್ಮಸಿ.

ಆಯುರ್ವೇದಾಚಾರ್ಯ ಪಂ|| ಶ್ರೀ ಶಿವಕುಮಾರಸ್ವಾಮಿಗಳಿಂದ ರಚಿತವಾಗಿರುವ "ಆರೋಗ್ಯ ದರ್ಪಣ"ವೆಂಬ ಈ ಕನ್ನಡ ಗ್ರಂಥವನ್ನು ಪರಿಶೀಲಿಸಲು ತುಂಬಾ ಸಂತೋಷವಾಗುತ್ತದೆ. ಇದರ ಪೀಠಿಕೆಯಲ್ಲಿ ಆಯುರ್ವೇದದ ಉತ್ಪತ್ತಿ, ಅದರ ಗತ ಮತ್ತು ವರ್ತಮಾನ ಸ್ಥಿತಿಗತಿಗಳು, ಕಾಲಾನುಸಾರವಾಗಿ ಒದಗಿದ ಏರಿಳಿತಗಳು, ನಾನಾಗ್ರಂಥಕರ್ತರು, ಅವರುಗಳ ಕಾಲ ಮತ್ತು ಅವರ ಗ್ರಂಥಗಳ ವೈಶಿಷ್ಟ್ಯ, ಈ ವಿಷಯಗಳಲ್ಲಿ ನಿಷ್ಪಕ್ಷಪಾತಿಗಳಾದ ಅನೇಕ ವಿದೇಶೀಯ ಪಂಡಿತರುಗಳ ವಿಮರ್ಶಾತ್ಮಕ ಅಭಿಪ್ರಾಯಗಳು ಇತ್ಯಾದ್ಯನೇಕ ಉಪಯುಕ್ತ ಮತು ಅಪೂರ್ವಗಳಾದ ವಿಚಾರಗಳು ಅನೇಕ ಗ್ರಂಥಗಳ ಪರಿಶೋಧನೆಯಿಂದ ಸಯುಕ್ತಿಕವಾಗಿ ವಿವರಿಸಲ್ಪಟ್ಟಂತಾಗಿರುವುದು ಈ ಗ್ರಂಥದ ಒಂದು ಮಹತ್ವದ ಪ್ರಯೋಜನವಾಗಿದೆ.

ಇನ್ನು ಗ್ರಂಥಸ್ಥ ವಿಚಾರಗಳನ್ನು ತೆಗೆದುಕೊಂಡರೆ---ಇದರಲ್ಲಿ ಅನುಸರಿಸಿರುವ ಸರಣಿಯು ವೃದ್ಧಾಚಾರಕೂ ಆರ್ಷಗ್ರಂಥ-ಪರಿಪಾಠಕ್ಕೂ ಲೋಪಬಾರದಂತೆ ಸುಸಂಗತವಾಗಿದೆ ಮತ್ತು ತಕ್ಕ ಶಾಸ್ತ್ರಾಧಾರಗಳೊಡನೆ ಆಧುನಿಕವಾಗಿ ನೂತನ ಶೈಲಿಯಲ್ಲಿ ಬರೆಯಲ್ಪಟ್ಟಿರುವ ನಮ್ಮ ನಿತ್ಯೋಪಯೋಗದಲ್ಲಿರಬಹುದಾದ ದಿನಚರ್ಯೆ, ಆಹಾರ ವಿಹಾರಗಳು ಮತ್ತು ಅವುಗಳ ಅನುಕರಣಕ್ಕೆ ಅನುಕೂಲವಾದ ಸುಲಭ ಚಿಕಿತ್ಸೆಗಳು, ಇವುಗಳೆಲ್ಲವೂ ಪ್ರತಿಯೊಬ್ಬ ಗೃಹಸ್ಥನಿಗೂ ತನ್ನ ನಿತ್ಯಕ್ರಮಗಳಲ್ಲಿ ಎಚ್ಚರಿಕೆಯಿಂದ ಹೆಜ್ಜೆಯನ್ನಿಡಲು ತುಂಬಾ ಸಹಕಾರಿಯಾಗಿರುತ್ತವೆ.

ಇದಲ್ಲದೆ ಇಂತಹ ಸುಲಭಶೈಲಿಯ ವೈದ್ಯಕೀಯ ವಿಷಯಕ ಗ್ರಂಥಗಳನ್ನು ಇತರ ಭಾಷೆಯಲ್ಲಿರುವಂತೆಯೇ ಕನ್ನಡದಲ್ಲಿಯೂ ವೃದ್ಧಿಗೊಳಿಸಲು ಸಂಕಲ್ಪಿಸಿ

ಮುಂದಡಿಯಿಟ್ಟಿರುವ ಈ ಗ್ರಂಥಕರ್ತರು ಕನ್ನಡಾಭಿಮಾನಿಗಳೆಲ್ಲರ ಕೃತಜ್ಞತೆಗೆ ಅರ್ಹರೇ ಸರಿ.

ಇಂತಹ ಶಾಸ್ತ್ರಸೇವೆ ಮತ್ತು ಭಾಷಾಸೇವೆಯ ಉದ್ಯಮಕ್ಕೆ ವೈದ್ಯ ಸಹೋದರರಿಂದಲೂ, ಪ್ರಜಾಕೋಟಿಯಿಂದಲೂ, ರಾಜಾನುಗ್ರಹದ ಮೂಲಕವೂ, ಅಗತ್ಯವಾದಷ್ಟು ಪುರಸ್ಕಾರವು ಭಗವದನುಗ್ರಹದಿಂದ ದೊರಕಲೆಂಬುದೇ ನನ್ನ ಮನಃಪೂರ್ವಕವಾದ ಹಾರೈಕೆ.

ಮೈಸೂರು, ೨೫-೭-೪೩ **ವೈ. ಲಕ್ಷ್ಮೀನರಸಿಂಹಶಾಸ್ತ್ರೀ.**

---

ಆಸ್ಥಾನ ಮಹಾವಿದ್ವಾನ್, ಪಂಡಿತರತ್ನಂ **ಶ್ರೀ ಗುರುಶಾಂತ ಶಾಸ್ತ್ರಿಗಳು**
ತ್ಯಾಗರಾಜ ರಸ್ತೆ, ಮೈಸೂರು

........ಶ್ರೀ ಸ್ವಾಮಿಗಳವರು ತಮ್ಮ ಈ ಮೊದಲನೆಯ ಗ್ರಂಥದಲ್ಲಿ ತಾವು ಕಾಶಿಯಲ್ಲಿ ದೀರ್ಘಕಾಲ ಅಧ್ಯಯನಮಾಡಿರುವ ನ್ಯಾಯ, ವೇದಾಂತ, ಆಯುರ್ವೇದ ಗ್ರಂಥಗಳ ಸಾರವನ್ನು ಸಂಗ್ರಹಿಸಿ ಲೋಕಾನುಭವದೊಡನೆ ಸಮಾವೇಶಗೊಳಿಸಿರುತ್ತಾರೆ. ಇದರ ವಿಸ್ತಾರವಾದ ಪೀಠಿಕೆಯಲ್ಲಿ ಆಯುರ್ವೇದದ ಪ್ರಾಚೀನೇತಿಹಾಸ, ಅದರ ಉನ್ನತಿ ಮತ್ತು ಕ್ರಮಿಕವಾದ ಅವನತಿ, ಆಯುರ್ವೇದ ಗ್ರಂಥಗಳು, ಈ ವಿಷಯಗಳನ್ನು ಕೂಲಂಕಷವಾಗಿ ವಿವೇಚಿಸಿ ಬರೆದಿರುವರಲ್ಲದೆ, ಇದಕ್ಕೆ ಪೌರ್ವಾತ್ಯ ಪಾಶ್ಚಿಮಾತ್ಯರ ಅನೇಕ ಪ್ರಮಾಣಗಳನ್ನೂ ಉಲ್ಲೇಖಿಸಿರುತ್ತಾರೆ.

ಇನ್ನು ಗ್ರಂಥದ ವಿಷಯವನ್ನು ತೆಗೆದುಕೊಂಡರೆ—ಈ ಗ್ರಂಥವು ಆದಿಯಿಂದ ಅಂತ್ಯದವರೆಗೂ ಸದಾಚಾರ, ಆರೋಗ್ಯ ರಕ್ಷಣೆಗಳಿಗೆ ಅನುಕೂಲಗಳಾದ ಉಪಯುಕ್ತ ವಿಷಯಗಳನ್ನೊಳಗೊಂಡಿದೆ. ನಮ್ಮ ನಿತ್ಯೋಪಯೋಗಿಗಳಾದ ಆಹಾರ ಪದಾರ್ಥಗಳ ಗುಣದೋಷಗಳನ್ನರಿತು ಆರೋಗ್ಯವನ್ನು ರಕ್ಷಿಸಿಕೊಂಡು, ರೋಗ ಬಂದಾಗ ಆ ಪದಾರ್ಥಗಳ ಸಹಾಯದಿಂದಲೇ ಅನೇಕ ವಿಧ ಚಿಕಿತ್ಸೆಗಳನ್ನು ಬಹು ಸುಲಭವಾಗಿ ಮಾಡಿಕೊಳ್ಳುವುದರ ಮೂಲಕ, ರೋಗನಿವಾರಣೆಯನ್ನು ಮಾಡಿಕೊಳ್ಳಲು ಈ ಗ್ರಂಥವು ಪ್ರತಿಯೊಬ್ಬ ಮನುಷ್ಯನಿಗೂ ಸಹಾಯಕಾರಿಯಾಗಿರುತ್ತದೆ...............

ಮೈಸೂರು, ತಾ॥ ೨೯-೭-೧೯೪೩ ಗುರುಶಾಂತಶಾಸ್ತ್ರೀ.

---

**ವೈ. ಚಂದ್ರಶೇಖರಶಾಸ್ತ್ರಿಗಳು,** ಎಂ.ಎ., ಸಾಹಿತ್ಯ ವಿದ್ವಾನ್,
ರಿಟೈರ್ಡ್ ಪ್ರಿನ್ಸಿಪಾಲ್, ಸಂಸ್ಕೃತ ಕಾಲೇಜ್, ಮೈಸೂರು,

.......ಆರೋಗ್ಯವು ತಪ್ಪಿದಾಗ ಆಸ್ಪತ್ರೆಗೆ ಅಲೆಯುವ ಕಷ್ಟವಿಲ್ಲದೆ, ಡಾಕ್ಟರಿಗೆ ಹಣವನ್ನು ತೆರಬೇಕಾದ ಅವಶ್ಯಕತೆ ಇಲ್ಲದೆ, ಹೆಚ್ಚು ವೆಚ್ಚ ಶ್ರಮಗಳೂ ಇಲ್ಲದೆ,

ಇದರಲ್ಲಿ ದೊರೆಯುವ ತಿಳಿವಳಿಕೆಯಿಂದ ತಕ್ಕ ರೀತಿಯಲ್ಲಿ ನಮ್ಮ ರೋಗಗಳನ್ನು ಸುಲಭವಾಗಿಯೂ, ಶೀಘ್ರವಾಗಿಯೂ ನಿವಾರಿಸಿಕೊಂಡು ಆರೋಗ್ಯಸುಖವನ್ನು ಪಡೆಯಲು ಇದು ನಿಜವಾಗಿಯೂ ವಿಶದವಾದ ತಿಳಿವಳಿಕೆಯನ್ನುಂಟು ಮಾಡುವ ಕೈಗನ್ನಡಿಯಾಗಿದೆ. ಆರೋಗ್ಯದಲ್ಲಿರುವವರು ರೋಗಗಳು ಬಾರದಿರುವಂತೆ ಮುನ್ನೆಚ್ಚರಿಕೆಯ ಕಾರ್ಯಗಳನ್ನು ನೆರವೇರಿಸಿಕೊಳ್ಳಲು ತುಂಬಾ ಸೌಕರ್ಯವಿದೆ. ದಿನಗಟ್ಟಲೆಯಲ್ಲಿ ನಾವು ಉಪಯೋಗಿಸುವ ಆಹಾರ ವಸ್ತುಗಳ ಗುಣವನ್ನು ತಿಳಿಯುವುದರಿಂದ "ಊಟಬಲ್ಲವಗೆ ರೋಗವಿಲ್ಲ"ವೆಂಬ ಗಾದೆಯಂತೆ ತಕ್ಕರೀತಿಯಲ್ಲಿ ರೋಗ ಬರದಿರುವಂತೆ ಮಾಡಿಕೊಳ್ಳಲು ಇದು ತುಂಬಾ ಸಹಾಯಕರವಾಗಿದೆ.... ರೋಗಸ್ವಭಾವ, ನಿದಾನ, ಚಿಕಿತ್ಸೆ ಇವುಗಳನ್ನು ಇದರಿಂದ ತಿಳಿಯಬಹುದಾಗಿದೆ.

ತಾ॥ ೨೫-೭-೪೩ ವೈ. ಚಂದ್ರಶೇಖರಶಾಸ್ತ್ರೀ,

---

A. N. **ನರಸಿಂಹಯ್ಯನವರು**, ಎಂ. ಎ., ಎಲ್. ಟಿ., ಪಿಎಚ್. ಡಿ. (ಲಂಡನ್)
ಪ್ರಿನ್ಸಿಪಾಲ್, ಮಹಾರಾಜರ ಸಂಸ್ಕೃತ ಕಾಲೇಜ್, ಮೈಸೂರು.

ಆಯುರ್ವೇದಾಚಾರ್ಯ, ವೈದ್ಯಮಾರ್ತಂಡ, ಭಿಷಗ್ರತ್ನ, ಸಾಹಿತ್ಯವಾರಿಧಿ ಪಂಡಿತ ಶ್ರೀ ಶಿವಕುಮಾರಸ್ವಾಮಿಗಳವರು .................. ಆಯುರ್ವೇದದಲ್ಲಿ ಪಂಡಿತರಾಗಿರುವುದಲ್ಲದೆ, ತರ್ಕ ವೇದಾಂತ ಶಾಸ್ತ್ರಗಳನ್ನೂ ಅಧ್ಯಯನ ಮಾಡಿರುವುದರಿಂದ, ಗ್ರಂಥಗಳನ್ನು ಯುಕ್ತಿಯುಕ್ತವಾಗಿಯೂ, ಹೃದಯಂಗಮವಾಗಿಯೂ ಬರೆಯಲು ತಕ್ಕ ಯೋಗ್ಯತೆಯನ್ನು ಹೊಂದಿರುತ್ತಾರೆ.................... ........ಈ ಗ್ರಂಥಕರ್ತರು ಸರ್ವಸಾಮಾನ್ಯರಿಗೂ ತಿಳಿಯುವಂತೆಯೂ ಆರೋಗ್ಯವನ್ನು ಕಾಪಾಡಿಕೊಳ್ಳಲು ಹಣದ ವ್ಯಯವಿಲ್ಲದೆ ಸುಲಭ ಚಿಕಿತ್ಸೆಗಳನ್ನು ಈ ಗ್ರಂಥದ ಸಹಾಯದಿಂದ ಮಾಡಿಕೊಳ್ಳಲು ಅನುಕೂಲವಾಗುವಂತೆಯೂ ಬರೆದಿರುತ್ತಾರೆ. ಸಾಮಾನ್ಯವಾದ ಆಹಾರಪದಾರ್ಥಗಳು, ಕಾಯಿಪಲ್ಯಗಳು, ಹಣ್ಣುಗಳು, ಇವುಗಳಿಂದ ಆಗುವ ಉಪಯೋಗಗಳನ್ನೂ, ಅವುಗಳನ್ನು ಕೆಲವು ಅನುಪಾನಗಳೊಡನೆ ಸೇವಿಸುವುದರಿಂದ ನಿವಾರಣೆಯಾಗುವ ರೋಗಗಳನ್ನೂ ತಿಳಿಸಿರುತ್ತಾರೆ. ಈ ಗ್ರಂಥದಿಂದ ಪಟ್ಟಣಿಗರಿಗೂ ಮತ್ತು ಹಳ್ಳಿಗಳಲ್ಲಿರುವವರಿಗೂ ಬಹಳ ಉಪಕಾರವಾಗುತ್ತದೆಂದು ಖಂಡಿತವಾಗಿ ಹೇಳಬಹುದು. ಹಳ್ಳಿಯಲ್ಲಿರುವವರಿಗೆ ಇವರು ತಿಳಿಸಿರುವ ನಾರು ಬೇರುಗಳು ಸುಲಭವಾಗಿ ದೊರಕುವುದರಿಂದ, ಗ್ರಾಮೋದ್ಧಾರಕ ಸಂಸ್ಥೆಯವರು ಇಂತಹ ಗ್ರಂಥಗಳ ಪ್ರಚಾರವನ್ನು ಗ್ರಾಮಗಳಲ್ಲಿ ಮಾಡುವ ಕಾರ್ಯವನ್ನು ಕೈಗೊಳ್ಳುವುದು ಒಳ್ಳೆಯದಾಗಿ ತೋರುತ್ತದೆ...............

25-7-1943 A. N. Narasimhia.

## ಧರ್ಮಪ್ರವರ್ತಕ ಡಾ|| ಟಿ. ಎಸ್. ಸಿದ್ದಪ್ಪನವರು, ಎಲ್.ಎಂ.ಅಂಡ್ಎಸ್.

(ರಿಟೈರ್ಡ್ ಡಿಸ್ಟ್ರಿಕ್ಟ್ ಮೆಡಿಕಲ್ ಆಫೀಸರ್, ಮೈಸೂರು)

........ ಈ ಗ್ರಂಥವು ಕನ್ನಡನಾಡಿನ ಜನಗಳಿಗೆ ಸುಲಭವಾಗಿ ತಿಳಿಯುವಂತೆ ಬರೆಯಲ್ಪಟ್ಟಿದೆ ಮತ್ತು ನಮ್ಮ ದೇಶದಲ್ಲಿ ದೊರೆಯತಕ್ಕ ಧಾನ್ಯ, ತರಕಾರಿ, ಹಣ್ಣುಗಳು ಮುಂತಾದ ಪದಾರ್ಥಗಳಲ್ಲಿರುವ ಗುಣದೋಷಗಳೂ, ಅವುಗಳಿಂದುಂಟಾಗುವ ಸುಲಭ ಚಿಕಿತ್ಸೆಗಳೂ ವಿಸ್ತಾರವಾಗಿ ಬರೆಯಲ್ಪಟ್ಟಿವೆ. ಸಾಧಾರಣವಾದ ದೇಹಾಲಸ್ಯವುಂಟಾದಾಗ ವೈದ್ಯರ ಸಹಾಯವಿಲ್ಲದೆ ನಮಗೆ ದೊರಕುವ ಸಾಧಾರಣ ವಸ್ತುಗಳಿಂದಲೇ ನಮ್ಮ ಪ್ರಾಥಮಿಕ ಚಿಕಿತ್ಸೆಯನ್ನು ಮಾಡಿಕೊಳ್ಳಲು ಈ ಗ್ರಂಥವು ಬಹಳ ಸಹಾಯಕಾರಿಯಾಗಿರುತ್ತದೆ. ಇದರಲ್ಲಿರುವ ಕೆಲವು ಪ್ರಯೋಗಗಳು ಆಂಗ್ಲೇಯ ಚಿಕಿತ್ಸೆಯಲ್ಲಿಯೂ ಉಪಯೋಗಿಸಲ್ಪಡುತ್ತಲಿವೆ.

ಶ್ರೀ ಸ್ವಾಮಿಗಳವರು ಅನೇಕ ಗ್ರಂಥಗಳನ್ನು ಪರಿಶೋಧಿಸಿ ಪೀಠಿಕೆಯಲ್ಲಿ ಆಯುರ್ವೇದದ ಪ್ರಾಚೀನೇತಿಹಾಸವನ್ನೂ ಅದರ ಶ್ರೇಷ್ಠತೆಯನ್ನೂ ತೋರಿಸಿರುವರಲ್ಲದೆ ಇತರ ದೇಶೀಯರ ಅಭಿಪ್ರಾಯಗಳನ್ನೂ ಸಂಗ್ರಹಿಸಿ ಬರೆದಿರುತ್ತಾರೆ.....

೨೭-೭-೧೯೪೩. ಟಿ. ಎಸ್. ಸಿದ್ಧಪ್ಪ.

---

## ಭಿಷಗ್ರತ್ನ ಆಯುರ್ವೇದ ವಿದ್ವಾನ್ ಬಿ. ವಿ. ಪಂಡಿತರು

ಸದ್ವೈದ್ಯಶಾಲಾ, ನಂಜನಗೂಡು

...........ಕನ್ನಡಭಾಷೆಯಲ್ಲಿ ಇಂತಹ ದರ್ಪಣವು ಅತ್ಯವಶ್ಯಕವಾಗಿ ಬೇಕಾಗಿತ್ತು. ಸಾಮಾನ್ಯವಾಗಿ ನಿತ್ಯವೂ ಬಳಕೆಯಲ್ಲಿರುವ ಸುಲಭವಾಗಿ ಸಿಕ್ಕುವ ಪದಾರ್ಥಗಳನ್ನೇ ತೆಗೆದುಕೊಂಡು ಅವುಗಳ ಮಹತ್ಪ್ರಯೋಜನವನ್ನು ಬಹು ಚನ್ನಾಗಿ ವಿವರಿಸಿರುವರು. ದೀರ್ಘಾಯುರಾರೋಗ್ಯವನ್ನು ಪಡೆಯಬಹುದಾದ ಶಾಸ್ತ್ರೀಯ ಮಾರ್ಗವನ್ನು ತಿಳುಹಿಸಿರುವರು. ನಿಖಿಲ ಕರ್ಣಾಟಕದ ಪ್ರತಿ ಮನೆಯಲ್ಲೂ ಈ ಪುಸ್ತಕವಿದ್ದರೆ ವೈದ್ಯರಪೇಕ್ಷೆಯೇ ಇಲ್ಲದೆ ಅನೇಕ ವ್ಯಾಧಿಗಳನ್ನು ಪರಿಹರಿಸಿಕೊಂಡು ಆರೋಗ್ಯಸುಖವನ್ನನುಭವಿಸಬಹುದೆಂದು ನನ್ನ ಹೃತ್ಪೂರ್ವಕವಾದ ಅಭಿಪ್ರಾಯ. ಆಯುರ್ವೇದ ಶಾಸ್ತ್ರದಲ್ಲಿ ಪೂರ್ಣ ಪಾಂಡಿತ್ಯಾನುಭವಗಳುಳ್ಳ ಇಂತಹ ಮಹನೀಯರಿಗೆ ಇಂತಹ ಗ್ರಂಥಗಳನ್ನು ಬರೆದು ಲೋಕಸೇವೆಯನ್ನು ಮಾಡುವ ಹೆಚ್ಚಿನ ಸಾಮರ್ಥ್ಯವನ್ನು ಪರಮೇಶ್ವರನು ಅನುಗ್ರಹಿಸಬೇಕೆಂಬುದೇ ನನ್ನ ಪ್ರಾರ್ಥನೆ.

ಬಿ. ವಿ. ಪಂಡಿತ್.

---

॥ ಶ್ರೀ ವಿಶ್ವೇಶ್ವರಃ ಶರಣಮ್ ॥

# ಆರೋಗ್ಯ ದರ್ಪಣ

ಅಪ್ರತ್ಯಕ್ಷಫಲಾಃ ಪ್ರಮಾಣವಿಕಲಾ ವಾಗ್ವಿಸ್ತರೈರಾಕುಲಾ ।
ವೇದಾಃ ಪ್ರಾಪ್ತಪದಾ ಯದಾಪ್ತವಚನಪ್ರಾಮಾಣ್ಯಸಾಮಾನ್ಯತಃ ।
ಪ್ರತ್ಯಕ್ಷೈಕಫಲಂ ತ್ರಿಸೂತ್ರಮಮಲಂ ಸ್ವಸ್ಥಾತುರಾಣಾಂ ಹಿತಂ
ತಂ ವಿದ್ಯಾಸ್ವಖಿಲಾಸು ಸತ್ತಮಮಹಂ ವೇದಂ ಭಜಾಮ್ಯಾಯುಷಃ ॥

## ಸ್ವಸ್ಥವೃತ್ತ

ಪ್ರಪಂಚದಲ್ಲಿ ಜೀವಧಾರಣೆಯನ್ನು ಮಾಡಿದ ಸಕಲ ಪ್ರಾಣಿಗಳು ಯಾವಾಗಲೂ ಸುಖವನ್ನೇ ಇಚ್ಛಿಸುವುವಲ್ಲದೆ ಸ್ವಪ್ನದಲ್ಲಿಯಾದರೂ ದುಃಖವನ್ನು ಅನುಭವಿಸಲಿಚ್ಛಿಸುವುದಿಲ್ಲ. ಇದು ಪ್ರಾಣಿಮಾತ್ರದ ಸ್ವಾಭಾವಿಕ ಗುಣವಾಗಿದೆ. ಅದರಲ್ಲಿಯೂ ಜ್ಞಾನ ಪ್ರಾಧಾನ್ಯದಿಂದ ಶ್ರೇಷ್ಠವಾದ ಮಾನವ ಜನ್ಮವನ್ನು ಹೊಂದಿದ ಪ್ರಾಣಿಗಳಂತೂ ತಮ್ಮ ಜೀವನವನ್ನು ನಾನಾವಿಧ ಸುಖಗಳ ನಿಧಿಯನ್ನಾಗಿ ಮಾಡಿಕೊಳ್ಳಲೋಸುಗ ಹಗಲಿರುಳು ನಾನಾವಿಧ ಉಪಾಯಗಳನ್ನು ಚಿಂತಿಸುತ್ತ ತಮ್ಮ ಸಮಸ್ತ ಜೀವಿತ ಸಮಯವನ್ನು ಅಂತಹ ಉಪಾಯಗಳನ್ನು ಹುಡುಕುವುದರಲ್ಲಿಯೇ ವಿನಿಯೋಗಿಸುತ್ತಾರೆ. ಈ ವಿಷಯವನ್ನು ಪ್ರತಿ ಕ್ಷಣದಲ್ಲಿ ನೋಡುತ್ತಲೂ ಕೇಳುತ್ತಲೂ ಇರುವುದಾಗಿದೆ.

ಜಗದ್ರಕ್ಷಕನಾದ ಪರಮೇಶ್ವರನು ಮಾನವ ಪ್ರಾಣಿಗಳ ಚಿಂತೆಯನ್ನು ದೂರಮಾಡುವುದಕ್ಕಾಗಿಯೇ ವಿದ್ಯೆ, ಧನ, ಪ್ರಭುತ್ವ, ಭೂಮಿ ಮೊದಲಾದ ಅನೇಕ ವಿಧ ಸಂಪತ್ತುಗಳನ್ನು ನಿರ್ಮಿಸಿರುವನು. ಈ ಸಂಪತ್ತುಗಳು ಅವರವರ ಪೂರ್ವಾರ್ಜಿತ ಸುಕೃತ ವಿಶೇಷದ ಪ್ರಭಾವದಿಂದ ಹೊಂದಲ್ಪಟ್ಟವುಗಳಾಗಿ ಮನುಷ್ಯ ಜೀವನವನ್ನು ಸುಖಮಯವನ್ನಾಗಿ ಮಾಡಲು ಸಮರ್ಥಗಳಾಗಿರುತ್ತವೆ. ಮಾನವರ ಕೀರ್ತಿ ಪ್ರತಿಷ್ಠೆಗಳಿಗೆ

ಈ ಸಂಪತ್ತುಗಳೇ ಕಾರಣವಾಗಿರುತ್ತವೆಂಬ ವಿಷಯವು ಸರ್ವಾನುಭವ ಸಿದ್ಧವಾಗಿರುತ್ತದೆ. ಇಹಲೋಕ ಪರಲೋಕ ಸುಖಗಳಿಗಾದರೂ ಈ ಸಂಪತ್ತುಗಳೇ ಕಾರಣವಾಗಿರುತ್ತವೆಂಬುದನ್ನು ಸಕಲ ಶಾಸ್ತ್ರಗಳೂ ಸಿದ್ಧ ಗೊಳಿಸುತ್ತವೆ. ಆದರೆ ಈ ನಾನಾವಿಧ ಸಂಪತ್ತುಗಳಿಂದ ವಿಭೂಷಿತ ರಾದವರೆಲ್ಲರೂ ಸುಖಿಗಳಾಗುವರೆ? ಈ ವಿಷಯವೇ ಅತಿ ಗಂಭೀರವೂ ವಿಚಾರಣೀಯವೂ ಆಗಿರುತ್ತದೆ.

ಲೋಕದಲ್ಲಿ ಮನುಷ್ಯನು ಸಂಪತ್ತಿನಿಂದೊಡಗೂಡಿದ ಮಾತ್ರಕ್ಕೇ ಸುಖಿಯಾಗುವನೆಂಬ ಮಾತು ಸ್ವಪ್ನಪ್ರಾಯವಾಗಿದೆ. ಮನುಷ್ಯನಲ್ಲಿ ಯಾವ ಸಂಪತ್ತಾದರೂ ಇರಲಿ ಜೀವನದ ಮುಖ್ಯ ಸಾರಭೂತವಾದ ಆರೋಗ್ಯಭಾಗ್ಯವೊಂದಿಲ್ಲದಿದ್ದರೆ ಆ ಸಂಪತ್ತು ಜನಸಂಚಾರವಿಲ್ಲದ ಘೋರಾರಣ್ಯದಲ್ಲಿ ಶರತ್ಕಾಲದ ಪೂರ್ಣಚಂದ್ರನ ಶೀತಲಕಿರಣವು ಬಿದ್ದಂತೆ ವ್ಯರ್ಥವಾಗುತ್ತದೆ.

ಆರೋಗ್ಯ ಭಂಡಾರದಿಂದ ರಹಿತನಾದವನು ಸಕಲವಿದ್ಯಾ ಪಾರಾ ವಾರ ಪಾರಂಗತನಾಗಿ ಲೋಕೋತ್ತರ ಪಾಂಡಿತ್ಯಮಂಡಿತನಾಗಿದ್ದರೂ, ನವಖಂಡ ಪೃಥ್ವಿಯನ್ನಾಳುವಂತಹ ಸಾರ್ವಭೌಮನಾಗಿದ್ದರೂ, ಅವನ ಪಾಂಡಿತ್ಯವೂ ಅವನ ಪ್ರತಿಭೆಯೂ ಅವನ ಪ್ರಭುತ್ವವೂ ಅವನ ಸಕಲ ವಿಧ ಸುಖಸಾಮಗ್ರಿಗಳೂ ಮರುಭೂಮಿಯಲ್ಲಿ ಬಿದ್ದ ಮಳೆಯಂತೆ ವ್ಯರ್ಥ ವಾಗುವುವು.

ನವದ್ವಾರಗಳಿಂದ ಅತಿಸುಂದರವಾದ ಶರೀರಮಂದಿರಕ್ಕೆ ಆಧಾರ ಭೂತವಾಗಿರುವ ಆರೋಗ್ಯವೆಂಬ ತಳಹದಿಯು ಸಡಿಲವಾದರಾಯಿತು! ಮಂದಿರದ ಶೋಭೆಯನ್ನು ವರ್ಧಿಸುತ್ತಲಿರುವ ಜ್ಞಾನೇಂದ್ರಿಯ ಕರ್ಮೇಂದ್ರಿಯಗಳೆಂಬ ಮಂದಿರದ ಸಾಮಗ್ರಿಗಳು ಶಿಥಿಲವಾಗಿ ತಾವಾಗಿಯೇ ಉರುಳಿ ಬೀಳುವಂತಾಗುವುವು. ಇಂತಹ ಮುರಕು ಮನೆಯಲ್ಲಿ ವಾಸಿಸಲು ಜುಗುಪ್ಸಿತನಾಗಿ ಮಂದಿರಾಧ್ಯಕ್ಷನಾದ ಜೀವಾತ್ಮನು ಸರ್ವಾಂಗಸುಂದರ ವಾದ ಮತ್ತೊಂದು ಹೊಸಮನೆಯನ್ನು ಹುಡುಕಿಕೊಳ್ಳುತ್ತಾನೆ.

ಆರೋಗ್ಯವೆಂಬ ಅನರ್ಘ ಮಾಣಿಕ್ಯವನ್ನು ಒಂದು ಸಲ ಕಳೆದು ಕೊಂಡಮೇಲೆ ಅದು ಪುನಃ ಸಿಗುವುದು ಅಸಂಭವದ ಮಾತಾಗಿದೆ.

ಆರೋಗ್ಯವೆಂಬ ಅಮೂಲ್ಯ ನಿಧಿಯಿಂದ ಅಲಂಕೃತನಾದವನಲ್ಲಿ ಸುಖಸಾಧನಗಳಾದ ಇತರ ಸಂಪತ್ತುಗಳಿಲ್ಲದಿದ್ದರೂ ಅವನು ಆಡಂಬರ ರಹಿತನಾಗಿ ತನ್ನ ಆರೋಗ್ಯಮಯ ಜೀವನವನ್ನೇ ಸುಖದ ನಿಧಿಯನ್ನಾಗಿ ತಿಳಿದುಕೊಂಡು ಭಗವದ್ಧ್ಯಾನ, ಸತ್ಕಥಾಕಾಲಕ್ಷೇಪಗಳಿಂದ ತನ್ನ ಜನ್ಮ ವನ್ನು ಸಾರ್ಥಕಗೊಳಿಸಿಕೊಳ್ಳುತ್ತಾನೆ.

ಆರೋಗ್ಯಶಾಲಿಯಾದವನು ತನ್ನ ಶಾರೀರಕ ಮಾನಸಿಕ ಬಲ ಗಳಿಂದ ಮಾನವಜನ್ಮದ ಮುಖ್ಯ ಧ್ಯೇಯಗಳಾದ ಧರ್ಮ ಅರ್ಥ ಕಾಮ ಮೋಕ್ಷಗಳೆಂಬ ಪುರುಷಾರ್ಥಗಳನ್ನು ಸಾಧಿಸಿಕೊಳ್ಳಲು ಸಮರ್ಥನಾಗು ವನು. ಆದುದರಿಂದಲೇ ಆರೋಗ್ಯವೆಂಬ ಲೋಕೋತ್ತರ ವಸ್ತುವು ಚತುರ್ವಿಧ ಪುರುಷಾರ್ಥಗಳಿಗೂ ಮೂಲಭೂತವಾಗಿರುವುದೆಂದು ಚರಕ ಮಹರ್ಷಿಯು — "ಧರ್ಮಾರ್ಥಕಾಮ ಮೋಕ್ಷಾಣಾ ಮಾರೋಗ್ಯಂ ಮೂಲಮುತ್ತಮಂ" ಎಂದು ಹೇಳಿರುತ್ತಾನೆ.

ಆರೋಗ್ಯವೆಂಬುದು ಬೆಲೆಯನ್ನು ಕೊಟ್ಟು ಕೊಳ್ಳಬೇಕಾದ ಬಾಹ್ಯ ವಸ್ತುವೇನೂ ಅಲ್ಲ. ಅದು ನಮ್ಮ ಕಾಲೋಚಿತಗಳಾದ ದೈನಿಕ ವ್ಯವಹಾರ ಗಳಿಂದಲೇ ಲಭಿಸುವಂತಹ ಅಂತರಂಗ ವಸ್ತುವಾಗಿದೆ. ಯಾವನು ಹಿತ ಮತ್ತು ಮಿತಗಳಾದ ಆಹಾರ ವಿಹಾರಗಳನ್ನು ಆಯಾಯ ಕಾಲಾನುಗುಣ ವಾಗಿ ಸೇವಿಸುತ್ತಿರುವನೋ ಅವನ ಶರೀರವು ಆರೋಗ್ಯ ಭಂಡಾರವಾಗುವು ದರಲ್ಲಿ ಯಾವ ಸಂಶಯವೂ ಇಲ್ಲ.

ಪ್ರಕೃತಿವಿರುದ್ಧ, ಕಾಲವಿರುದ್ಧಗಳಾದ ಆಹಾರ ವಿಹಾರಗಳನ್ನು ಸೇವಿಸುವುದರಿಂದ ವಾತಾದಿ ದೋಷಗಳು ಕುಪಿತಗಳಾಗಿ ಶರೀರವು ನಾನಾವಿಧ ರೋಗಗಳ ಭಂಡಾರವಾಗುವುದು. ವೈದ್ಯಶಾಸ್ತ್ರ ನಿಯಮ ವಿರುದ್ಧವಾದ ಆಚರಣೆಯಿಂದ ಆರೋಗ್ಯವನ್ನು ಕಳೆದುಕೊಂಡು ಪ್ರತಿ ದಿನದಲ್ಲಿಯೂ ನಾನಾವಿಧ ಔಷಧಗಳ ಸೇವನೆಗೋಸುಗ ವೈದ್ಯರ ಮನೆಯ ಹಾದಿಗಳನ್ನು ಸವೆಸುತ್ತಿರುವ ನಮ್ಮ ಭಾರತೀಯರ ಬುದ್ಧಿ ಬಲವನ್ನೆಷ್ಟು ಹೊಗಳಿದರೂ ತೀರದಾಗಿದೆ. ಕುಳಿತಲ್ಲಿಯೇ ಸುಲಭವಾಗಿ ತಮ್ಮ ನಿತ್ಯಾಹಾರವಿಹಾರಗಳಲ್ಲಿ ಕಾಲೋಚಿತವಾದ ಪರಿವರ್ತನೆಯನ್ನು ಮಾಡಿಕೊಂಡು ಆರೋಗ್ಯಸುಖವನ್ನು ಹೊಂದುವುದಕ್ಕಿಂತಲೂ ಮಿಗಿಲಾದ

ವಿವೇಕಶೀಲತೆಯು ಮತ್ತಾವುದುಂಟು? "ಪ್ರಕ್ಷಾಳನಾದ್ಧಿ ಪಂಕಸ್ಯ ದೂರಾದ ಸ್ಪರ್ಶನಂ ವರಂ" ಎಂಬ ನೀತಿವಚನದಂತೆ ಕೆಸರಿನಲ್ಲಿ ಕೈಯನ್ನು ಹಾಕಿ ಪುನಃ ಅದನ್ನು ತೊಳೆದುಕೊಳ್ಳುವ ಕಷ್ಟವನ್ನು ವಹಿಸುವುದಕ್ಕಿಂತಲೂ ಕೆಸರಿನಿಂದ ದೂರವಾಗಿರುವುದೇ ಬುದ್ಧಿಶಾಲಿಗಳ ಕರ್ತವ್ಯವಾಗಿರುವುದಲ್ಲವೆ? ಆರೋಗ್ಯವನ್ನು ಸ್ಥಿರಗೊಳಿಸುವಂತಹ ವಿಹಿತಾಚರಣೆಯ ಕಡೆಗೆ ಲಕ್ಷ್ಯಗೊಡದೆ ನಾನಾವಿಧ ರೋಗಗಳಿಗೆ ಆಮಂತ್ರಣವನ್ನಿತ್ತು ಪುನಃ ಅವುಗಳನ್ನು ನಿವಾರಿಸಿಕೊಳ್ಳಲು ಧನವ್ಯಯ ಮತ್ತು ಶರೀರ ಪರಿಶ್ರಮವನ್ನು ವಹಿಸುವುದು ವಿವೇಕಶಾಲಿಗಳಾದವರಿಗೆ ಶೋಭಿಸಲಾರದು.

ನಮ್ಮ ಜನ್ಮಭೂಮಿಯಾಗಿರುವ ಈ ಭಾರತದೇಶಕ್ಕೆ ಶಿರೋಮಣಿಗಳಾಗಿಯೂ, ಭೂಮಂಡಲಕ್ಕೇ ಆದರ್ಶವ್ಯಕ್ತಿಗಳಾಗಿಯೂ ಇದ್ದ ನಮ್ಮ ಪ್ರಾಚೀನ ಮಹಾಪುರುಷರು ಹಿತಾಹಾರ ವಿಹಾರ ಶೀಲರಾಗಿ ಆರೋಗ್ಯ ಸಂಪತ್ತಿನಿಂದ ಕೂಡಿದವರಾಗಿದ್ದುದರಿಂದಲೇ ತಮ್ಮ ವಿದ್ಯಾ, ಬುದ್ಧಿ, ಶೌರ್ಯ, ತಪಸ್ಸಾಮ್ರಾಜ್ಯ ವೈಭವಗಳಿಂದ ಜಗತ್ತಿನ ಮಾನವ ಸಮೂಹಕ್ಕೇ ಮಾರ್ಗದರ್ಶಕರಾಗಿದ್ದರು. ಇಂತಹ ಮಹಾಮಹಿಮರೂ ಕರುಣಾಶಾಲಿಗಳೂ ಆದ ಚರಕ ಸುಶ್ರುತಾದಿ ಮಹರ್ಷಿಗಳು ಆಯುರ್ವೇದ ರತ್ನಾಕರವನ್ನು ಮಥಿಸಿ ಹಿತಾಹಿತಬೋಧಕಗಳಾದ ಆರೋಗ್ಯಸೂತ್ರಗಳೆಂಬ ದಿವ್ಯರತ್ನಗಳನ್ನು ಜಗತ್ಕಲ್ಯಾಣಕ್ಕಾಗಿ ಪ್ರಸಾರಗೊಳಿಸಿರುವರು. ಇಂತಹ ದಿವ್ಯರತ್ನಗಳ ತೇಜೋಮಯವಾದ ಬೆಳಕಿನಲ್ಲಿ ಮಾನವರು ಹಿತಾಹಾರ ವಿಹಾರರೂಪಗಳಾದ ಮಾರ್ಗಗಳಿಂದ ಪ್ರವೇಶಿಸಿ, ಆರೋಗ್ಯವೆಂಬ ಸರ್ವೋತ್ತಮ ವಸ್ತುವನ್ನು ಹೊಂದಲೆಂಬುದೇ ಆಗ್ನಿವೇಶ ಚರಕ ಸುಶ್ರುತಾದಿ ಮಹರ್ಷಿಗಳ ಪ್ರಧಾನೋದ್ದೇಶವಾಗಿರುತ್ತದೆ.

ಈ ಆರೋಗ್ಯಸೂತ್ರಗಳು ಚರಕ ಸುಶ್ರುತಾದಿ ಗ್ರಂಥಗಳಲ್ಲಿ 'ಸ್ವಸ್ಥವೃತ್ತ' ಎಂಬ ಅಂಕಿತದಿಂದ ಪರಿಶೋಭಿಸುತ್ತಿವೆ. ಸ್ವಸ್ಥನ ಲಕ್ಷಣಗಳನ್ನು ಸುಶ್ರುತಮಹರ್ಷಿಯು,—

ಸಮದೋಷಃ ಸಮಾಗ್ನಿಶ್ಚ ಸಮಧಾತುಮಲಕ್ರಿಯಃ ।
ಪ್ರಸನ್ನಾತ್ಮೇಂದ್ರಿಯಮನಾಃ ಸ್ವಸ್ಥ ಇತ್ಯಭಿಧೀಯತೇ ॥

ಸುಶ್ರುತ ಸೂ. ಅ. ೧೬

ಎಂಬ ಶ್ಲೋಕದಿಂದ ವರ್ಣಿಸಿರುವನು. ವಾತ, ಪಿತ್ತ, ಕಫಗಳ ಸಮಾನತೆ ಯಿಂದ ಕೂಡಿದವನೂ, ಮಂದ ವಿಷಮ ತೀಕ್ಷ್ಣ ಸಮ ಎಂಬ ಜಠರಾಗ್ನಿ ಗಳಲ್ಲಿ ಶ್ರೇಷ್ಠವಾದ ಸಮಾಗ್ನಿಯಿಂದ ಕೂಡಿದವನೂ, ರಸ, ರಕ್ತ, ಮಾಂಸ, ಮಜ್ಜ, ಅಸ್ಥಿ, ವೀರ್ಯಗಳೆಂಬ ಸಪ್ತಧಾತುಗಳ ಮತ್ತು ಮಲ, ಮೂತ್ರ, ಸ್ವೇದ (ಬೆವರು) ಗಳೆಂಬ ಮಲತ್ರಯದ ಸಮಾನಕ್ರಿಯೆಯಿಂದ ಕೂಡಿದವನೂ, ದೃಢಶರೀರ ಮತ್ತು ನಿರ್ಮಲಗಳಾದ ಇಂದ್ರಿಯ ಮನಸ್ಸು ಗಳಿಂದ ಯುಕ್ತನಾದವನೂ, ಸ್ವಸ್ಥ (ಆರೋಗ್ಯವಂತ) ನೆಂದೆನಿಸಿಕೊಳ್ಳು ತ್ತಾನೆ. ಈ ಸ್ವಸ್ಥನಾದ ಮನುಷ್ಯನು ತನ್ನ ಸ್ವಾಸ್ಥ್ಯವನ್ನು ರಕ್ಷಿಸಿಕೊಳ್ಳುವು ದಕ್ಕಾಗಿ ಆಚರಿಸಬೇಕಾಗಿರುವ ಆಚರಣೆಗೆ "ಸ್ವಸ್ಥವೃತ್ತ" ಎಂಬ ನಾಮ ಧೇಯವುಂಟಾಗಿರುತ್ತದೆ. ಇಂತಹ ಸ್ವಸ್ಥವೃತ್ತವನ್ನನುಸರಿಸಿ ನಡೆಯತಕ್ಕ ವನು ಆರೋಗ್ಯಸಂಪನ್ನನಾಗುವನೆಂದು ಚರಕಮಹರ್ಷಿಯು,—

> ಸ್ವಸ್ಥವೃತ್ತಂ ಯಥೋದ್ದಿಷ್ಟಂ ಯಃ ಸಮ್ಯಗನುತಿಷ್ಠತಿ ।
> ಸ ಸಮಾಃ ಶತಮವ್ಯಾಧಿರಾಯುಷಾ ನ ವಿಯುಜ್ಯತೇ ॥
>
> ಚರಕ. ಸೂ. ೮.

ಎಂದು ಹೇಳಿರುವನು. ಶಾಸ್ತ್ರವಿಹಿತವಾದ ಸ್ವಸ್ಥವೃತ್ತವನ್ನು ಕ್ರಮದಿಂದ ಆಚರಿಸುವ ಮನುಷ್ಯನು 'ಶತಾಯುರ್ವೈ ಪುರುಷಃ ಶತವೀರ್ಯಃ' (ಐ.ಶ್ರು.೨-೭) ಎಂಬ ಶ್ರುತಿವಾಕ್ಯದಂತೆ ಮರಣಪರ್ಯಂತವಾಗಿ ಜ್ಞಾನೇಂ ದ್ರಿಯ ಕರ್ಮೇಂದ್ರಿಯಗಳಲ್ಲಿ ಅಕುಂಠಿತವಾದ ಶಕ್ತಿಯನ್ನು ಹೊಂದಿ, ವ್ಯಾಧಿ ರಹಿತನಾಗಿ, ನೂರು ವರ್ಷಗಳ ಪೂರ್ಣಾಯುಷ್ಯವನ್ನು ಹೊಂದುತ್ತಾನೆ.

ಸ್ವಸ್ಥವೃತ್ತವೆಂಬ ಬೀಜದಲ್ಲಿ ಆರೋಗ್ಯವೆಂಬ ಮಹಾ ವೃಕ್ಷವು ಅಂಕುರರೂಪದಿಂದ ಅಂತರ್ಗತವಾಗಿದ್ದು ಹಿತಾಹಾರ ವಿಹಾರ ರೂಪ ವಾದ ಮಳೆಯು ಬಿದ್ದನಂತರ ಬಹಿರ್ಗತವಾಗಿ ಕಾಲಕ್ರಮದಿಂದ ಅಭಿ ವೃದ್ಧಿಯನ್ನೈದಿ ನಿರೋಗತೆ, ಬಲ, ವರ್ಣ, ಬುದ್ಧಿ, ದೀರ್ಘಾಯುಗಳೆಂಬ ಅಮೃತ ಸದೃಶಗಳಾದ ಸುಮಧುರ ದಿವ್ಯಫಲಗಳನ್ನು ಕೊಟ್ಟು ಮಾನವ ರನ್ನು ಆನಂದಗೊಳಿಸುತ್ತದೆ.

ಉಚಿತಾಹಾರವಿಹಾರಗಳಿಂದ ಪರಿಪೋಷಿತವಾದ ಸ್ವಸ್ಥಶರೀರದಲ್ಲಿ ಋತುಪರಿವರ್ತನೆ ಅಥವಾ ಪೂರ್ವಕರ್ಮವಶದಿಂದ ಒಂದು ವೇಳೆ ರೋಗ

ವುಂಟಾದರೂ ಅದು ವಿಶೇಷ ಬಾಧಕವಾಗಲಾರದು. ಮತ್ತು ಸಾಮಾನ್ಯ ಉಪಚಾರಗಳಿಂದಲೇ ಶಾಂತವಾಗುತ್ತದೆ. ಆದುದರಿಂದ ಆರೋಗ್ಯಾಭಿಲಾಷಿಯಾದ ಪ್ರತಿಯೊಬ್ಬ ವಿವೇಕಶಾಲಿಯಾದ ಮನುಷ್ಯನೂ,—

ನಗರೀ ನಗರಸ್ಯೇವ ರಥಸ್ಯೇವ ರಥೀ ಯಥಾ।
ಸ್ವಶರೀರಸ್ಯ ಮೇಧಾವೀ ಕೃತ್ಯೇಷ್ವವಹಿತೋ ಭವೇತ್॥

ಚರಕ. ಸೂ.ಅ. ೫.

ನಗರಾಧ್ಯಕ್ಷನು ನಗರ ರಕ್ಷಣೆಯಲ್ಲಿ ಹೇಗೆ ಎಚ್ಚರದಿಂದಿರುವನೋ, ರಥಾರೋಹಣವನ್ನು ಮಾಡಿದವನು ರಥದ ರಕ್ಷಣೆಯಲ್ಲಿ ಹೇಗೆ ಎಚ್ಚರದಿಂದಿರುವನೋ, ಅದೇ ರೀತಿಯಾಗಿ ಹಿತಾಚರಣೆಯಿಂದ ಶರೀರಾರೋಗ್ಯವನ್ನು ಕಾಪಾಡಿಕೊಳ್ಳುವುದರಲ್ಲಿ ಪ್ರತಿಕ್ಷಣದಲ್ಲಿಯೂ ಎಚ್ಚರದಿಂದ ಇರಬೇಕಾಗುತ್ತದೆ.

ಪ್ರತಿಯೊಬ್ಬನೂ ಮೊದಲು ರೋಗವುಂಟಾಗದಿರುವುದಕ್ಕೆ ಸಮುಚಿತಗಳಾದ ಉಪಾಯಗಳನ್ನು ಹುಡುಕಿ ಅವುಗಳನ್ನು ಆಚರಣೆಯಲ್ಲಿ ತಂದು ಅನಂತರ ರೋಗ ನಿವಾರಣೋಪಾಯಗಳನ್ನು ಹುಡುಕಿಕೊಳ್ಳುವುದು ಸರ್ವೋತ್ತಮಕಾರ್ಯವಾಗಿದೆ.

ದಿನಚರ್ಯೆಯೆಂಬ ದೃಢತರವಾದ ಮಹಾದ್ವಾರದಿಂದೊಡಗೂಡಿ ಅತಿ ಬಂಧುರವಾಗಿರುವ ಸ್ವಸ್ಥವೃತ್ತವೆಂಬ ಅಭೇದ್ಯವಾದ ಕೋಟೆಯು ರೋಗಸಮೂಹವೆಂಬ ಶತ್ರುಮಂಡಲದ ಆಕ್ರಮಣವನ್ನು ತಡೆಯಲು ಸಮರ್ಥವಾಗಿರುತ್ತದೆ. ಈ ಕೋಟೆಯಲ್ಲಿ ವಾಸಿಸುವ ಮಾನವ ಶರೀರಕ್ಕೆ ಜ್ವರಾದಿರೋಗಗಳೆಂಬ ವೈರಿಗಳ ಭಯವು ಸ್ವಪ್ನದಲ್ಲಿಯೂ ಸಂಭವಿಸಲಾರದು. ಆದುದರಿಂದ ವಿವೇಕಿಗಳಾದ ಪ್ರಿಯ ಪಾಠಕರು ಇಂತಹ ಬಂಧುರವಾದ ಕೋಟೆಯಲ್ಲಿ ವಾಸಮಾಡುತ್ತ ವೈರಿಗಳ ಆಕ್ರಮಣದಿಂದ ರಹಿತರಾಗಿ, ಆರೋಗ್ಯಸಾಮ್ರಾಜ್ಯ ಸುಖವನ್ನು ಅನುಭವಿಸುವರಾಗಲೆಂದು ರೋಗಪ್ರತಿಬಂಧಕವೂ, ಹಿತಾಹಿತ ಬೋಧಕವೂ, ಆಗಿರುವ ಸ್ವಸ್ಥವೃತ್ತವನ್ನು ಮೊದಲು ನಿರೂಪಿಸಿ ಅನಂತರ ರೋಗನಿವಾರಣೆಗೆ ಅತಿ ಸುಲಭಸಾಧ್ಯಗಳಾದ ಚಿಕಿತ್ಸೆಗಳನ್ನು ನಿರೂಪಿಸುವುದು ಉಚಿತವಾಗಿರುತ್ತದೆ.

# ೧. ಪ್ರಾತಃಕಾಲ

ಬ್ರಾಹ್ಮ್ಯೇ ಮುಹೂರ್ತೇ ಬುಧ್ಯೇತ ಸ್ವಸ್ಥೋ ರಕ್ಷಾರ್ಥಮಾಯುಷಃ ।
ದಿನದುಃಖಪ್ರಶಾಂತ್ಯರ್ಥಂ ಸ್ಮರೇಚ್ಛಿವಪದಾಂಬುಜಂ ॥

ದೀರ್ಘಾಯುವನ್ನು ಅಪೇಕ್ಷಿಸುವ ಸ್ವಸ್ಥನಾದ ಮನುಷ್ಯನು ಪ್ರತಿ ದಿನದ ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತ ಮುನ್ನವೇ ದುಃಖ ನಿವಾರಕನಾದ ಪರಮೇಶ್ವರನ ಪಾದಾರವಿಂದಗಳನ್ನು ಭಕ್ತಿಯಿಂದ ಸ್ಮರಿಸುತ್ತ ಹಾಸಿಗೆಯನ್ನು ಬಿಟ್ಟೇಳಬೇಕು.

ಬ್ರಾಹ್ಮ್ಯಮುಹೂರ್ತದಲ್ಲಿ ಏಳುವುದು ಆರೋಗ್ಯವನ್ನು ಸ್ಥಿರಗೊಳಿಸತಕ್ಕದಾಗಿದೆ. ಯಾರು ರಾತ್ರಿಯಲ್ಲಿ ಬೇಗನೆ (೧೦ ಗಂಟೆಯೊಳಗೆ) ಮಲಗಿ ಪ್ರಾತಃಕಾಲದಲ್ಲಿ ಬೇಗನೆ (೪ ಗಂಟೆಯೊಳಗೆ) ಏಳುವರೋ ಅವರಿಗೆ ಪ್ರಾಯಶಃ ಯಾವ ರೋಗಗಳೂ ಬರಲಾರವು. ಅವರ ಶರೀರವು ಆರೋಗ್ಯಮಂದಿರವಾಗಿ ವಿದ್ಯೆ, ಬುದ್ಧಿ, ಪೂರ್ಣಾಯುಗಳೆಂಬ ಅನುಪಮ ವಸ್ತುಗಳಿಂದ ಪರಿಶೋಭಿಸುವಂತಾಗುತ್ತದೆ.

ಸೂರ್ಯೋದಯಕ್ಕಿಂತ ಪೂರ್ವದ ರಾತ್ರಿಯ ಕಡೆಯ ಯಾಮವು ಅತ್ಯಂತ ಪವಿತ್ರಮಯವಾದುದರಿಂದ ಇದಕ್ಕೆ ಬ್ರಾಹ್ಮ್ಯಮುಹೂರ್ತವೆಂಬ ನಾಮಧೇಯವುಂಟಾಗಿರುವುದು. ಈ ಅಮೃತವೇಳೆಯಲ್ಲಿ ಎಚ್ಚರಗೊಳ್ಳುವುದು ಸರ್ವಾರ್ಥಸಾಧಕವಾದುದೆಂದು ಘೋಷಿಸುತ್ತಿರುವ,—

ರಾತ್ರೇಶ್ಚ ಪಶ್ಚಿಮೋ ಯಾಮೋ ಮುಹೂರ್ತೋ ಯಸ್ತೃತೀಯಕಃ ।
ಸ ಬ್ರಾಹ್ಮ್ಯ ಇತಿ ವಿಖ್ಯಾತೋ ವಿಹಿತಃ ಸಂಪ್ರಬೋಧನೇ ॥

ಎಂಬ ಆಯುರ್ವೇದ ಸಿದ್ಧಾಂತವು ಸರ್ವಸಾಮಾನ್ಯವಾಗಿರುತ್ತದೆ.

ಬ್ರಾಹ್ಮ್ಯ ಸಮಯದಲ್ಲಿನ ಪರಿಶುದ್ಧ ವಾಯುವು ಇಂದ್ರಿಯ ಮನಸ್ಸುಗಳಲ್ಲಿ ಸಾತ್ವಿಕ ಭಾವವನ್ನು ಉದಯಗೊಳಿಸಿ ಶರೀರದಲ್ಲಿ ಬಲ, ವರ್ಣ, ಸ್ಫೂರ್ತಿಗಳನ್ನು ಸ್ಥಿರಗೊಳಿಸುವುದು. ಈ ಸಮಯವು ಅತಿ ಕಠಿಣತರವಾದ ವಿಷಯವನ್ನು ಅತಿಸುಲಭವಾಗಿ ಸ್ಫುರಣೆಗೊಳಿಸುವಂತಹ ಅಸಾಧಾರಣ ಗುಣದಿಂದ ಕೂಡಿರುವುದಾಗಿದೆ. ಈ ಸಮಯದಲ್ಲಿ ಅಧ್ಯಯನ ಮಾಡಿದ ವಿದ್ಯೆಯು ಚಿರಸ್ಥಾಯಿಯಾಗುವುದೆಂಬ ವಿಷಯವು

ಶಾಸ್ತ್ರ ಮತ್ತು ಅನುಭವಗಳಿಂದ ಸಿದ್ಧವಾಗಿದೆ. ವಿದ್ಯಾಧ್ಯಯನಶೀಲರಿಗೆ ಈ ಪವಿತ್ರಸಮಯವು ಕಲ್ಪತರುವಿನಂತೆ ಇಷ್ಟಾರ್ಥದಾಯಕವಾಗಿರುತ್ತದೆ. ಆಂಗ್ಲಭಾಷೆಯಲ್ಲಿಯಾದರೂ "Early to bed and early to rise makes a man healthy, wealthy and wise" ರಾತ್ರಿಯಲ್ಲಿ ಬೇಗನೆ ಮಲಗಿ ಪ್ರಾತಃಕಾಲದಲ್ಲಿ ಬೇಗನೆ ಏಳುವ ಮನುಷ್ಯನು ಆರೋಗ್ಯಶಾಲಿಯೂ ಭಾಗ್ಯಶಾಲಿಯೂ ಬುದ್ಧಿಶಾಲಿಯೂ ಆಗುತ್ತಾನೆಂಬ ನೀತಿವಚನವು ಪ್ರಸಿದ್ಧವಾಗಿದೆ.

ಈಗಿನ ಕಾಲದ ವಿಲಾಸಮಯ ಜೀವಿಗಳೂ, ಆಲಸ್ಯಮೂರ್ತಿಗಳೂ, ಲಕ್ಷ್ಮೀಕೃಪಾಪಾತ್ರರೂ, ಆದ ಅನೇಕ ಜನರು ಜಗತ್ತಿನವರೆಲ್ಲಾ ಎಚ್ಚತ್ತು ತಮ್ಮತಮ್ಮ ಜೀವನ ನಿರ್ವಾಹಕಾರ್ಯದಲ್ಲಿ ಪ್ರವೇಶಿಸುತ್ತಿದ್ದರೂ ಅದನ್ನು ಅರಿಯದೆ; ತಾವು ಮಾತ್ರ ಮಾಯಾಮಯಿಯಾದ ನಿದ್ರಾದೇವಿಯ ಮೋಹಪಾಶದಿಂದ ಬಂಧಿತರಾಗಿ ಸೂರ್ಯನು ಉದಯಾಚಲವನ್ನು ಬಿಟ್ಟು ಆಕಾಶಮಧ್ಯದ ಅರ್ಧಮಾರ್ಗವನ್ನು ಅತಿಕ್ರಮಿಸುವ ವರೆಗೂ ಮಿಥ್ಯಾ ಸುಖದ ಸ್ವಪ್ನಗಳಲ್ಲಿ ವಿಲೀನರಾಗುತ್ತಿರುವರು!

ಪ್ರಾತಃಕಾಲದಲ್ಲಿ ೮-೯ ಗಂಟೆಗಳ ವರೆಗೆ ನಿದ್ರಾವಶರಾಗಿರುವ ಪದ್ಧತಿಯು ಪ್ರಾಯಶಃ ಸಕಲ ದೇಶಗಳಲ್ಲಿ ವಿರಾಜಿಸುತ್ತಿರುವ, ಅನಂತ ಸುಖ ಸಾಮಗ್ರಿಗಳಿಂದ ಕೂಡಿರುವ ಶ್ರೀಮಂತರಲ್ಲಿಯೇ ವಿಶೇಷವಾಗಿ ತೋರಿಬರುತ್ತಿದೆ. ಇವರಿಗೆ ಜೀವಿಕೆಯ ಚಿಂತೆಯೇ ಇಲ್ಲದಿರುವಾಗ ಬಡವರಂತೆ ಜೀವನ ನಿರ್ವಾಹದ ಸಾಮಗ್ರಿಯನ್ನು ಹುಡುಕಿಕೊಳ್ಳಲೋಸುಗ ಬೇಗನೆ ಏಳುವಂತಹ ಪ್ರಸಂಗವಾದರೂ ಏನಿದೆ? ಇಂತಹ ಆಲಸಿಗಳಾದ ಹಣವಂತರು ಪ್ರಾತಃಕಾಲದಲ್ಲಿ ಬಹಳ ಹೊತ್ತಿನ ವರೆಗೆ ಮಲಗಿರುವ ಕೆಟ್ಟಪದ್ಧತಿಯನ್ನು ಅವಲಂಬಿಸಿ ಮಲಬದ್ಧತೆಯೇ ಮೊದಲಾದ ಅಜೀರ್ಣ ರೋಗಗಳಿಂದ ನಿತ್ಯದಲ್ಲಿ ನರಳುತ್ತ, ಆರೋಗ್ಯ ಭಾಗ್ಯಕ್ಕೆ ತಿಲಾಂಜಲಿಯನ್ನಿತ್ತು, ಯಾವಾಗಲೂ ವರ್ತಮಾನಪತ್ರಗಳಲ್ಲಿ ಆರೋಗ್ಯ ವರ್ಧಕಗಳೆಂದು ಪ್ರಕಟಿಸಲ್ಪಡುತ್ತಿರುವ ಔಷಧಗಳ ಮಾಯಾಜಾಲದಲ್ಲಿ ಸಿಕ್ಕಿ, ಹಣವನ್ನು ನೀರಿನಂತೆ ಸುರಿಯುತ್ತಿರುವುದನ್ನು ನೋಡಿದರೆ ಯಾರಿಗೆ ದುಃಖವುಂಟಾಗದು? ವೈದ್ಯಶಾಸ್ತ್ರ ನಿಯಮಗಳನ್ನನುಸರಿಸಿ

ನಡೆಯುವವರಿಗೆ ಆರೋಗ್ಯವರ್ಧನೆಗಾಗಿ ಇತರ ಔಷಧಗಳ ಆವಶ್ಯಕತೆಯೇ ಇರುವದಿಲ್ಲವೆಂಬ ವಿಷಯವು ಇಂತಹ ಆಡಂಬರ ಜೀವಿಗಳಿಗೆ ಸ್ವಪ್ನದಲ್ಲಿಯೂ ಬರುವಂತಿಲ್ಲ.

ಸೂರ್ಯೋದಯ ಸೂರ್ಯಾಸ್ತಮಯ ಸಮಯಗಳಲ್ಲಿ ಮಲಗಿರುವವರನ್ನು ಲಕ್ಷ್ಮಿಯು ಬಿಟ್ಟೋಡುವಳೆಂದು, "ಸೂರ್ಯೋದಯೇ ಚಾಸ್ತಮಿತೇ ಶಯಾನಂ ವಿಮುಂಚತಿ ಶ್ರೀರ್ಯದಿ ಚಕ್ರಪಾಣಿಃ" ಎಂಬ ಚಾಣಿಕ್ಯನ ನೀತಿವಚನವು ಸಾರುತ್ತಿದೆ.

ಪ್ರಿಯಪಾಠಕರೇ! ನೀವು ಆರೋಗ್ಯಶಾಲಿಗಳಾಗಿ ಪ್ರಾಚೀನ ಮಹಾಪುರುಷರಂತೆ ಆದರ್ಶ ವ್ಯಕ್ತಿಗಳಾಗಬೇಕೆಂದು ಇಚ್ಛಿಸುವುದಾದರೆ ಪ್ರತಿದಿನದ ಪ್ರಾತಃಕಾಲದಲ್ಲಿ ಸೂರ್ಯೋದಯಕ್ಕಿಂತ ಪೂರ್ವಸಮಯವಾದ ಬ್ರಾಹ್ಮ್ಯ ಮುಹೂರ್ತದಲ್ಲಿ ಏಳುವ ಪವಿತ್ರ ನಿಯಮವನ್ನು ಅವಲಂಬಿಸಿ ಸುಖಿಗಳಾಗುವುದು ಉತ್ತಮ ಮಾರ್ಗವಾಗಿದೆ.

## ೨. ಶೌಚವಿಧಿ

ಪ್ರಾತಃಕಾಲದಲ್ಲಿ ಎದ್ದನಂತರ ಸ್ವಲ್ಪ ಹೊತ್ತಿನ ವರೆಗೆ ಶುದ್ಧ ವಾಯುವಿನ ಸಂಚಾರವುಳ್ಳ ಪ್ರದೇಶದಲ್ಲಿ ತಿರುಗಾಡಿ ಅನಂತರ ಮಲವಿಸರ್ಜನೆಯನ್ನು ಮಾಡುವುದು ಉತ್ತಮವಾಗಿದೆ. ಹೀಗೆ ತಿರುಗಾಡುವುದರಿಂದ ಅನಾಯಾಸವಾಗಿ ಮಲವಿಸರ್ಜನೆಯಾಗುತ್ತದೆ. ಎದ್ದಕೂಡಲೆ ಶೌಚಾಲಯದ ಕಡೆಗೆ ಓಡುವುದು ಉಚಿತವಲ್ಲ. ಮಲದ ವೇಗವಿದ್ದರೆ ಮಾತ್ರ ನೂರಾರು ಕೆಲಸಗಳನ್ನಾದರೂ ಬಿಟ್ಟು ಮಲದ ವೇಗವನ್ನು ನಿವಾರಿಸಿಕೊಳ್ಳುವುದು ಮುಖ್ಯ ಕಾರ್ಯವಾಗಿದೆ. ಮಲಮೂತ್ರಗಳ ವೇಗವನ್ನು ತಡೆಯುವುದು ಹೆಡೆಯನ್ನೆತ್ತಿಕೊಂಡು ಓಡುತ್ತಿರುವ ಸರ್ಪದ ವೇಗವನ್ನು ತಡೆಯುವುದರಿಂದ ಯಾವ ಪರಿಣಾಮವುಂಟಾಗುವುದೋ ಆದಕ್ಕಿಂತಲೂ ಹೆಚ್ಚಾದ ಭಯಂಕರ ಪರಿಸ್ಥಿತಿಯನ್ನು ಉಂಟುಮಾಡುವುದಾಗಿದೆ. ಮಲಮೂತ್ರಗಳ ವೇಗವನ್ನು ತಡೆಯುವುದರಿಂದ ಹೊಟ್ಟೆಯು ಊದಿಕೊಳ್ಳುವುದು, ಹೊಟ್ಟೆನೋವು, ಗುದಸ್ಥಾನದಲ್ಲಿ ಮತ್ತು ಮೂತ್ರಾಶಯದಲ್ಲಿ ಕತ್ತರಿಯಿಂದ ಕತ್ತರಿಸಿದಂತಾಗುವುದು, ದುರ್ಗಂಧಯುಕ್ತಗಳಾದ

ತೇಗುಗಳು ಬರುವುದು, ಉರಿಮೂತ್ರ, ತಲೆನೋವು ಮೊದಲಾದ ಪ್ರಾಣ ಘಾತಕಗಳಾದ ಉಪದ್ರವಗಳು ತಲೆದೋರುತ್ತವೆ.

ಸ್ವಾಭಾವಿಕವಾಗಿ ತೋರುವ ಮಲ, ಮೂತ್ರ, ತೇಗು, ಆಕಳಿಕೆ ಹಸಿವು, ನೀರಡಿಕೆ, ಕಣ್ಣೀರು, ನಿದ್ರೆ, ಪರಿಶ್ರಮದಿಂದುಂಟಾದ ನಿಶ್ವಾಸ, ಮುಂತಾದುವುಗಳ ವೇಗವನ್ನು ತಡೆಯುವುದರಿಂದ ನಾನಾ ರೋಗ ಗಳುಂಟಾಗುವುವೆಂದು ಚರಕ ಮಹರ್ಷಿಯು,—

> ನ ವೇಗಾನ್ ಧಾರಯೇದ್ಧೀಮಾನ್ ಜಾತಾನ್ ಮೂತ್ರ ಪುರೀಷಯೋಃ ।
> ನೋದ್ಗಾರಸ್ಯ ನ ಜೃಂಭಾಯಾ ನ ವೇಗಾನ್ ಕ್ಷುತ್ಪಿಪಾಸಯೋಃ ॥
> ನ ಬಾಷ್ಪಸ್ಯ ನ ನಿದ್ರಾಯಾ ನಿಶ್ವಾಸಸ್ಯ ಶ್ರಮೇಣ ಚ
> ಏತಾನ್ ಧಾರಯತೋ ಜಾತಾನ್ ವೇಗಾನ್ ರೋಗಾ ಭವಂತಿ ಹಿ ॥
>
> ಚರಕ ಸೂ. ಅ, ೭.

ಎಂಬುದಾಗಿ ಹೇಳಿರುವನು.

ಯುಕ್ತಾಯುಕ್ತ ವಿಚಾರಪರನಾದ ಮನುಷ್ಯನು ಈ ವೇಗಗಳನು ತಡೆಯದೆ ಲೋಕದಲ್ಲಿ ಮತ್ತು ಸಮಾಜದಲ್ಲಿ ನಾನಾವಿಧಗಳಾದ ಅನರ್ಥ ಗಳನ್ನುಂಟುಮಾಡುವ ಮಾನಸಿಕ, ವಾಚಿಕ, ಕಾಯಿಕಗಳಾದ ದುಷ್ಕರ ಗಳ ವೇಗವನ್ನು ತಡೆಯುವುದೇ ಇಹಪರ ಸಾಧಕವಾದ ಪರಮ ಕರ್ತವ್ಯ ವಾಗಿರುವುದೆಂದು ಚರಕಸಂಹಿತೆಯು, 'ನ ವೇಗಾನ್ ಧಾರಣೀಯ' ಎಂಬ ಸೂತ್ರಸ್ಥಾನದ ೭ನೆಯ ಅಧ್ಯಾಯದಲ್ಲಿ,—

> ಇಮಾಂಸ್ತು ಧಾರಯೇದ್ವೇಗಾನ್ ಹಿತೈಷೀ ಪ್ರೇತ್ಯ ಚೇಹ ಚ
> ಸಾಹಸಾನಾ ಮಶಸ್ತಾನಾಂ ಮನೋವಾಕ್ಕಾಯ ಕರ್ಮಣಾಂ ॥

ಎಂದು ಸಾರುತ್ತಿದೆ. ಮತ್ತು ಇದೇ ಅಧ್ಯಾಯದಲ್ಲಿರುವ ತ್ರಿಕರಣಗಳ ದುಷ್ಕಾರ್ಯ ವೇಗವರ್ಣನೆಯು ಅತಿ ಮನೋಹರವೂ ಸನ್ಮಾರ್ಗ ದರ್ಶಕವೂ ಆಗಿರುವುದರಿಂದ ಇಲ್ಲಿ ಅದನ್ನು ಉದಾಹರಿಸುವುದು ಅನುಚಿತವಾಗ ಲಾರದು.

> ಲೋಭ ಶೋಕ ಭಯ ಕ್ರೋಧ ಮಾನ ವೇಗಾನ್ ವಿಧಾರಯೇತ್
> ನೈರ್ಲಜ್ಜ್ಯೇರ್ಷ್ಯಾತಿರಾಗಣಾ ಮಭಿಧ್ಯಾಯಾಶ್ಚ ಬುದ್ಧಿಮಾನ್ ॥

ಲೋಭ, ಶೋಕ, ಭಯ, ಕ್ರೋಧ, ಮಾನ (ತನ್ನನ್ನು ತಾನೇ ಮಹಾಪುರುಷನೆಂದು ತಿಳಿದುಕೊಳ್ಳುವುದು) ನಿರ್ಲಜ್ಜತೆ (ಕೆಟ್ಟಕೆಲಸವನ್ನು

ಜನರಿಗೆ ತೋರಗೊಡದಂತೆ ಮುಚ್ಚಿಟ್ಟುಕೊಳ್ಳುವುದು) ಈರ್ಷ್ಯೆ (ಪರರ ಅಭ್ಯುದಯವನ್ನು ನೋಡಿ ಸಹಿಸದಿರುವಿಕೆ) ಅತಿರಾಗ (ವಿಷಯಗಳಲ್ಲಿ ಮಿತಿಮೀರಿದ ಆಸಕ್ತಿ) ಅಭಿಧ್ಯೆ. (ಪರರ ದ್ರವ್ಯವನ್ನಪಹರಿಸಬೇಕೆಂಬ ದುರಾಶೆ) ಇವೇ ಮೊದಲಾದ ಮಾನಸಿಕ ದುರ್ಗುಣಗಳ ವೇಗವನ್ನು ತಡೆಯಬೇಕು.

ಪರುಷಸ್ಯಾಽತಿಮಾತ್ರಸ್ಯ ಸೂಚಕಸ್ಯಾಽನೃತಸ್ಯ ಚ ।
ವಾಕ್ಯಸ್ಯಾಽಕಾಲಯುಕ್ತಸ್ಯ ಧಾರಯೇದ್ವೇಗಮುತ್ಥಿತಂ ॥

ಪರುಷಭಾಷಣ (ಪರರ ಮನಸ್ಸನ್ನು ನೋಯಿಸುವಂತಹ ಬಿರುಸು ಮಾತು) ಅತಿಮಾತ್ರ ಭಾಷಣ (ವ್ಯರ್ಥವಾಗಿ ಬಹಳ ಮಾತಾಡುವುದು) ಸೂಚಕಭಾಷಣ (ಇತರರಿಗೆ ಹಾನಿಯನ್ನುಂಟು ಮಾಡುವ ಮಾತು) ಅಸತ್ಯಭಾಷಣ, ಅಪ್ರಸ್ತುತ ಮತ್ತು ಅಸಂಬದ್ಧವಾಗಿರುವ ಭಾಷಣ, ಇವೇ ಮುಂತಾದ ವಾಚಿಕ ದುರ್ವ್ಯಾಪಾರಗಳ ವೇಗವನ್ನು ತಡೆಯಬೇಕು.

ದೇಹಪ್ರವೃತ್ತಿರ್ಯಾ ಕಾಚಿದ್ವರ್ತತೇ ಪರಪೀಡಯಾ ।
ಸ್ತ್ರೀಭೋಗಸ್ತೇಯಹಿಂಸಾದ್ಯಾ ತಸ್ಯಾ ವೇಗಾ ವಿಧಾರಯೇತ್ ॥

ಪರಸ್ತ್ರೀಸಂಪರ್ಕ, ಕಳ್ಳತನ, ಪ್ರಾಣಿಹಿಂಸೆ, ಮೊದಲಾದ ಶಾರೀರಕ ದುರ್ವ್ಯಾಪಾರಗಳ ವೇಗವನ್ನೂ ಮತ್ತು ಪರರಿಗೆ ಹಿಂಸೆಯನ್ನುಂಟು ಮಾಡುವ ಸಕಲವಿಧ ಶಾರೀರಕ ಚೇಷ್ಟೆಗಳ ವೇಗವನ್ನೂ ತಡೆಯಬೇಕು.

ನಮ್ಮ ಭಾರತ ದೇಶವಾಸಿಗಳಲ್ಲಿ ನೂರಕ್ಕೆ ೯೦ ಜನಗಳು ಆಲಸ್ಯ ದಿಂದಲೋ! ಇತರ ಕಾರ್ಯಗಳ ಗದ್ದಲದಲ್ಲಿ ತೊಡಗುವುದರಿಂದಲೋ! ನಾಚಿಕೆಯಿಂದಲೋ! ಉಚಿತ ಸ್ಥಾನದ ಅಭಾವದಿಂದಲೋ! ಸ್ವಾಭಾವಿಕವಾಗಿ ತೋರಿಬರುವ ಮಲಮೂತ್ರಾದಿಗಳ ವೇಗವನ್ನು ತಡೆಯುತ್ತ ನಾನಾ ರೋಗಗಳಿಗೆ ಈಡಾಗುತ್ತಿರುವುದನ್ನು ಪ್ರತಿದಿನದಲ್ಲಿ ನೋಡುತ್ತಲೂ ಕೇಳುತ್ತಲೂ ಇರುವುದಾಗಿದೆ. ಆದರಲ್ಲಿಯೂ ಈ ವೇಗಗಳ ತಡೆಯಿಂದ ಉದಯಿಸುವ, ಸಕಲ ರೋಗಗಳಿಗೆ ಜನ್ಮಸ್ಥಾನವಾಗಿರುವ, ಮಲಬದ್ಧತೆಯೆಂಬ ಮಹಾ ವ್ಯಾಧಿಯಿಂದ ನರಳುತ್ತಿರುವವರೇ ವಿಶೇಷವಾಗಿ ಕಾಣಿಸುತ್ತಾರೆ. ಈ ಮಲಬದ್ಧತೆಗೆ ಮಲದ ವೇಗವನ್ನು ತಡೆಯುವುದೇ ಕಾರಣವಲ್ಲದೆ ಇನ್ನೂ ಅನಂತಕಾರಣಗಳಿರುವುವು. ಅಕಾಲ

